

# ಸಪ್ತಗಿರಿ

ಜೂನ್ **84**

ಬೆಲೆ: ಒಂದು ರೂಪಾಯಿ

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಇದನಾದರು ಕೊಡದಿದ್ದರೆ ನಿನ್ನ
ಪದ ಕಮಲವ ನಂಬಿ ಭಜಿಸುವುದೆಂತೊ ॥ ಪ ॥

ಗ್ರಾಸವಾಸಗಳಿಗೆ ಇಲ್ಲವೆಂದು ನಿನ್ನ
ಬೇಸತ್ತು ಬೇಡ ಬಂದುದಿಲ್ಲ
ವಾಸುದೇವನೆ ನಿನ್ನ ದಾಸರ ದಾಸರ
ದಾಸರ ದಾಸ್ಯವ ಕೊಡು ಸಾಕೆಂದರೆ

ಒಡವೆ ವಡ್ಯಾಣಗಳಿಲ್ಲೊಂದು
ಬಡವನೆಂದು ಬೇಡ ಬಂದುದಿಲ್ಲ
ಒಡೆಯ ನಿನ್ನಡಿಗಳಿಗೆರಗುವುದಕೆ ಮನ
ವಿಡುತಿಹುದೊಂದನು ಕೊಡು ಸಾಕೆಂದರೆ

ಸತಿ ಸುತರುಗಳಿಂದ ಸಹಿತನಾಗಿ ನಾನು
ಹಿತದಿಂದಿಂಬೇಕೆಂದು ಬಂದುದಿಲ್ಲ
ಇತರ ವಿಷಯಕ್ಕೆರಗುವ ಮನಸಿಗೆ ನಿನ್ನ
ಸತತ ಕಥಾಮೃತ ಕರುಣಿಸು ಎಂದರೆ 3

ಸಾಲವಾಯಿತು ಇನ್ನು ಸಂಬಳವೆನಗೆ
ಸಾಲದೆಂದು ಬೇಡಬಂದುದಿಲ್ಲ
ನಾಲಿಗೆಯಲಿ ನಿನ್ನ ನಾಮಾಮೃತವನ್ನು
ಕಾಲಕಾಲದಿ ಪಾಲಿಸಬೇಕೆಂಬರೆ 4

ಆಗಬೇಕು ರಾಜ್ಯಭೋಗಗಳೆನುತಲಿ
ರಾಗದಿಂದ ಬೇಡ ಬಂದುದಿಲ್ಲ
ನಾಗಶಯನ ರಂಗವಿಠಲ ನಾ ನಿನ್ನ
ಬಾಗಿಲ ಕಾಯುವ ಭಾಗ್ಯ ಸಾಕೆಂದರೆ 5

–ಶ್ರೀಪಾದರಾಜರು




ಗೌರವ ಸಂಪಾದಕರು :

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





**ಸಂಪುಟ ೧೫] ಜೂನ್ ೧೯೮೪ [ಸಂಚಿಕೆ ೧**


# ವಿಷಯಸೂಚಿ

# ಸಂಪಾದಕೀಯ

ಶ್ರೀ ವೆಂಕಟೇಶ್ವರಸ್ವಾಮಿಯ ಕೃಪೆಯಿಂದಲೂ, ಆಸ್ತಿಕಭಕ್ತರ ಅಭಿಮಾನದಿಂದಲೂ ಉಂಟಾದ 'ಸಪ್ತಗಿರಿ' ಮಾಸ ಪತ್ರಿಕೆ 15ನೇ ವರ್ಷಕ್ಕೆ ಕಾಲಿಟ್ಟಿದೆ. ಪ್ರಗತಿಗಾಮಿ ಪುರುಷಾರ್ಥಕ್ಕೆ ಮುನ್ನೋಟ ಅಗತ್ಯವಿರುವಂತೆಯೇ ಬಂದ ದಾರಿಯ ಸಿಂಹಾವಲೋಕನ ಕೂಡ ಬಹುಮುಖ್ಯವೆಂದು ಬಲ್ಲವರು ಹೇಳುತ್ತಾರೆ.

1949 ರಲ್ಲಿ ತಿರುಮಲೆ–ತಿರುಪತಿ ದೇವಸ್ಥಾನಗಳ ಆಲಯ ವಿವರಗಳನ್ನು ತಿಳಿಸುವ ಉದ್ದೇಶದಿಂದ ಹುಟ್ಟಿದ ತಿ. ತಿ. ದೇ. ಬುಲೆಟಿನ್, 1970 ಹಿಂದೂ ಧರ್ಮದ ಪ್ರಸಾರ, ಸಂಸ್ಕೃತಿಯ ಕೈಗನ್ನಡಿಯಾಗುವ ಉದ್ದೇಶದಿಂದ 'ಸಪ್ತಗಿರಿ' ಎಂಬ ಹೆಸರನ್ನು ಹೊಂದಿ ಹೊಸರೂಪವನ್ನು ತಳೆಯಿತು. ಕ್ರಮೇಣ ಆಂಗ್ಲ, ತಮಿಳು, ತೆಲುಗು, ಕನ್ನಡ, ಹಿಂದಿ ಭಾಷೆಗಳ್ಲಿ ಬೇರೆ ಬೇರೆ ಪತ್ರಿಕೆಗಳಾಗಿ ಸಾಮಾಜಿಕ, ಪ್ರಾಂತೀಯ ವೈಶಿಷ್ಟ್ಯಗಳಿಂದ ಕೂಡಿ, ಹಿಂದೂಧರ್ಮದ ಏಕತೆಯನ್ನು ಹೆಚ್ಚು ಚೆನ್ನಾಗಿ ಬಿಂಬಿಸಲು ಅನುವಾಯಿತು. ಇಂದು ಸಪ್ತಗಿರಿಯ ಒಟ್ಟು ಪ್ರಸ್ತಾರ ಐವತ್ತು ಸಾವಿರ ಪ್ರತಿಗಳಿಗೂ ಹೆಚ್ಚಿದ್ದರೂ ಕನ್ನಡ ಸಪ್ತಗಿರಿಯ ಪ್ರಸಾರ ಹೆಚ್ಚಿಗೆ ಹೇಳಿಕೊಳ್ಳುವಂತಹ ಗಮನಾರ್ಹ ಬದಲಾವಣೆಯನ್ನೇನೂ ಹೊಂದಿಲ್ಲ. ಬಹುಶಃ ಕನ್ನಡಿಗರ ನಿಧಾನದ ಆದರೆ ಖಚಿತ ಗಮನದ ಧೋರಣೆಯೂ ಕಾರಣವಿರಬಹುದು. ಆದರೂ ಈಗ ಉಂಟಾಗುತ್ತಿರುವ ಪ್ರಸಾರದ ಬೆಳವಣಿಗೆಯ ದರ ಕಡಮೆಯೆಂದೇ ಹೇಳಬೇಕು. ಕನ್ನಡಿಗರು–ಓದುಗರು–ಸಪ್ತಗಿರಿಯನ್ನು ಕೊಂಡು ಓದುವ ಹವ್ಯಾಸವನ್ನು ಹೆಚ್ಚು ಬೆಳೆಸಿಕೊಳ್ಳಬೇಕಾದ ಅಗತ್ಯವಿದೆ.

ಸಪ್ತಗಿರಿ ಮಾಸಪತ್ರಿಕೆಯ ಉತ್ಪಾದನಾ ವೆಚ್ಚ ಸುಮಾರು ಮೂರು ರೂಪಾಯಿಗಳು. ತಿ. ತಿ. ದೇವಸ್ಥಾನಗಳು ಓದುಗರಿಗೆ ಈ ಪುಸ್ತಕವನ್ನು ಒಂದು ರೂಪಾಯಿಗೆ ನೀಡುತ್ತಿದೆಯೆಂದರೆ ಅದಕ್ಕೆ ಕಾರಣ ಹಿಂದೂ ಧರ್ಮ ಪ್ರಸಾರದ ಉದ್ದೇಶವೇ ಮುಖ್ಯವೆನ್ನಬಹುದು. ಇಂತಲ್ಲಿ ಭಕ್ತರು–ಆಸ್ತಿಕರು ಇದರ ಲಾಭವನ್ನು ಹೆಚ್ಚು ಹೆಚ್ಚಿಗೆ ಪಡೆದಲ್ಲಿ ಈ ಯೋಜನೆ ಉದ್ದೇಶ ಸಾರ್ಥಕವಾಗುತ್ತದೆ.

ಈ ಹಿಂದಿನ ಹದಿನಾಲ್ಕು ವರ್ಷಗಳಲ್ಲಿ ಸಪ್ತಗಿರಿಯ ಒಳತಿರುಳಿನಲ್ಲಿ ಅನೇಕ ಹೊಸ ಹೊಸ ರೂಪಗಳು ತಲೆದೋರಿವೆ. ತಿ. ತಿ. ದೇವಸ್ಥಾನಗಳ ಆಡಳಿತ ವ್ಯವಸ್ಥೆ ಹೇಗೆ ಹೇಗೆ ಮಾನವೋಪಯೋಗಿ, ಧರ್ಮೋಪಯೋಗಿ, ಯಾತ್ರಿಕೋಪಯೋಗಿ ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡು ನಡೆಸುತ್ತಿದೆ ಎಂಬುದರ ವಿವರಣೆಯನ್ನು ದೇಶದ ಎಲ್ಲ ಮೂಲೆಗಳಿಗೆ ತಿಳಿಸುವುದೇ ಅಲ್ಲದೆ, ದೇಶದ ಇತರೆಡೆಗಳಲ್ಲಿನ ದೇವಾಲಯಗಳ, ಧಾರ್ಮಿಕ ಕಾರ್ಯಗಳ ವಿವರಗಳನ್ನೂ ನೀಡುತ್ತ ಧರ್ಮಾಸಕ್ತರಿಗೆ ಹೆಚ್ಚು ಹೆಚ್ಚು ಹತ್ತಿರವಾಗುತ್ತಿದೆ. ಓದುಗಳ ಹೆಚ್ಚು ಲಾಭಕ್ಕಾಗಿ ವಿವಿಧ ವಿಶೇಷ ಸ್ಥಿರ ಶೀರ್ಷಿಕೆಗಳಿಂದ ಆಯಾಯಾ ವಿಷಯಗಳಿಗೆ ಹೆಚ್ಚು ಒತ್ತು ನೀಡಲಾಗುತ್ತಿದೆ. ಹಬ್ಬ ಹರಿದಿನಗಳ, ಜಯಂತಿ ವರ್ಧಂತಿಗಳ ಸಮಯಕ್ಕೆ ತಕ್ಕಂತೆ ಆಯಾ ವಿವರಗಳನ್ನೂ ನೀಡುತ್ತಿದೆ.

ಎಲ್ಲಕ್ಕೂ ಮುಖ್ಯ ಕಾರಣ ಓದುಗರನ್ನು ತೊಡಗಿಸಿಕೊಳ್ಳಬೇಕು ಎಂಬುದೇ ಆಗಿದೆ. ಓದುಗರು ಸಪ್ತಗಿರಿಗೆ ಅಭಿಮಾನಿಗಳಾಗಿ, ಪ್ರತಿಸ್ಪಂದಿಸುತ್ತ ತಮ್ಮ ಸಲಹೆ ಸೂಚನೆಗಳನ್ನು ನೀಡಿದಲ್ಲಿ ಸಪ್ತಗಿರಿ ಇನ್ನೂ ಹೆಚ್ಚು ಸರ್ವಾಂಗ ಸುಂದರವಾಗಲು ಸಾಧ್ಯ.

ಕುಂದು ಕೊರತೆಗಳಿಲ್ಲವೆಂದಲ್ಲ, ರಾಘವಾಂಕ ಹೇಳಲಿಲ್ಲವೇ 'ನಡೆವರೆಡಹದೆ.........'. ಆ ಬಗ್ಗೆಯೂ ಸಪ್ತಗಿರಿಗೆ ಓದುಗನೇ ಮಾರ್ಗದರ್ಶಿ.

ಶ್ರೀ ವೆಂಕಟೇಶ್ವರಸ್ವಾಮಿಯ ಅನುಗ್ರಹದಿಂದಲೂ, ಓದುಗ, ಏಜಂಟರ ಸಹಕಾರದಿಂದಲೂ, ಆಡಳಿತದ ಔದಾರ್ಯದಿಂದಲೂ ಹದಿನಾಲ್ಕು ವರ್ಷ ನಡೆದಿದೆ. ಇನ್ನೂ ಮುಂದೆ ಹೆಚ್ಚಿನ ಅನುಗ್ರಹ ಸಹಕಾರ ಔದಾರ್ಯಗಳು ಸಪ್ತಗಿರಿಗೆ ದೊರಕಿ, ಇದು ಶ್ರೀ ವೆಂಕಟೇಶ್ವರಸ್ವಾಮಿಯ – ಹಿಂದೂ ಧರ್ಮದ ತೂರ್ಯವಾಗಲಿ ಎಂಬುದಷ್ಟೆ ಬೇಡಿಕೆ. ★

# ಅನ್ನಮಾಚಾರ್ಯ ಜಯಂತಿ ಉತ್ಸವಗಳು

ತಿರುಪತಿ ಅನ್ನಮಾಚಾರ್ಯ ಕಲಾ ಮಂದಿರ ದಲ್ಲಿ 15–5–84 ರಿಂದ 17–5–84 ರವರೆಗೆ ಶ್ರೀ ಅನ್ನಮಾಚಾರ್ಯರ 576 ನೇ ಜಯಂತಿ ಉತ್ಸವಗಳು ಸರಳವಾಗಿ ವೈವಿಧ್ಯಮಯವಾಗಿ ನಡೆದವು.

ಮೇ 15 ರಂದು ಬೆಳಗ್ಗೆ ಅನ್ನಮಾಚಾರ್ಯರ ಭಾವಚಿತ್ರವನ್ನು ತಿ. ತಿ. ದೇ. ಪರಿಪಾಲಕ ಭವನ ದಿಂದ ಅನ್ನಮಾಚಾರ್ಯ ಕಲಾಮಂದಿರಕ್ಕೆ ಮೆರ ವಣಿಗೆಯಲ್ಲಿ ಹಲವಾರು ವಿದ್ವಾಂಸರ ಸಮೂಹ ಗಾಯನದೊಡನೆ ತರಲಾಯಿತು. ಶ್ರೀಮತಿ ವಿ. ಲೀಲಾವತಿ ಅವರ ಸಂಗೀತ ಕಚೇರಿ ನಡೆದು, ಅಂದು ಸಂಜೆ ಚಲನ ಚಿತ್ರ ನಟ, ಸಾಹಿತಿ ಶ್ರೀ ಸುದರ್ಶನ ಭಟ್ಟಾಚಾರ್ಯರ ಅನ್ನಮಾಚಾರ್ಯ ಹರಿಕಥೆಯ ನಂತರ, ತಿ. ತಿ. ದೇ. ಸಹಕಾರ್ಯನಿರ್ವಹಣಾ ಧಿಕಾರಿ ಶ್ರೀ ಡಿ. ಸುಬ್ಬರಾಯುಲು ಅವರ ಅಧ್ಯಕ್ಷ ತೆಯಲ್ಲಿ ನಡೆದ ಸಾಹಿತ್ಯಸಭೆಯಲ್ಲಿ, ಶ್ರೀ ಮುದಿ ವರ್ತಿ ಕೊಂಡಮಾಚಾರ್ಯರು ಉಪನ್ಯಾಸ ನೀಡಿದರು. ಹೈದರಾಬಾದಿನ ಶ್ರೀಮತಿ ರಾಜೇ ಶ್ವರಿ ಶ್ರೀನಿವಾಸನ್ ಮತ್ತು ವೃಂದದವರಿಂದ ಗಾಯನವಾದ ನಂತರ ಶ್ರೀ ಪಿ. ಪಿ. ಸೋಮ ಯಾಜುಲು ಅವರು ಏಕೈಕ ವಯೋಲಿನ್ ವಾದ ನದಿಂದ ಸಭೆಯನ್ನು ರಂಜಿಸಿದರು.

16–5–84 ರಂದು ಬೆಳಗ್ಗೆ ಅನ್ನಮಾ ಚಾರ್ಯ ಪ್ರಾಜೆಕ್ಟ್ ಕಲಾವಿದರಿಂದ ಸಂಗೀತ ಸಭೆನಡೆಯಿತು. ಅಂದು ಸಂಜೆ ಶ್ರೀಮತಿ ಜಯಾ ಪಶುಪತಿ ಅವರ ಗಾಯನ ಸಭೆಯನಂತರ ಶ್ರೀ ಪಶುಪತಿಯರ ಅಧ್ಯಕ್ಷತೆಯಲ್ಲಿ ಡಾ॥ ಮುಟ್ನೂರಿ ಸಂಗಮೇಶಮ್ ಅವರು ಅನ್ನಮಾಚಾರ್ಯರ ಕೃತಿಗಳ ಹಿರಿಮೆಯನ್ನು ಕುರಿತು ಮಾತನಾಡಿ ದರು. ಶ್ರೀ ನೂಕಲ ಚಿನ ಸತ್ಯನಾರಾಯಣ ಅವರ ಗಾಯನ ಸಭೆ ಅಸಂಖ್ಯ ಶ್ರೋತೃಗಳನ್ನು ಆನಂದ ಸಾಗರದಲ್ಲಿ ಓಲಾಡುವಂತೆ ಮಾಡಿತು. ನಂತರ ವಿಜಯವಾಡದ ಶ್ರೀಮತಿ ಎಂ. ಜಲ ಜಾಕ್ಷಿ ಮತ್ತು ವೃಂದದವರ ಗಾಯನ ಸಭೆಯೂ ರಂಜಿಸಿತು.

17 – 5 – 84 ರಂದು ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರಿಂದ ಸಂಗೀತ ಸಭೆ ನಡೆ ಯಿತು. ಅಂದು ಸಂಜೆ ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ನಡೆದ ಸಾಹಿತ್ಯ ಸಭೆಯಲ್ಲಿ ಡಾ॥ ಕರುಣಶ್ರೀ ಜಂಧ್ಯಾಲ ಪಾಪಯ್ಯ ಶಾಸ್ತ್ರಿ ಅವರು ಮಾತನಾಡಿದರು.

# ವಾರ್ತಾಲಹರಿ

'ಅನ್ನಮಯ್ಯ ಸಂಕೀರ್ತನ ಪುಷ್ಪಮಾಲಾ' ಕಾರ್ಯಕ್ರಮ ಈ ಬಾರಿಯ ವಿಶೇಷ ಆಕರ್ಷಣೆ ಆಗಿತ್ತು. ಅನ್ನಮಾಚಾರ್ಯರ ಕೃತಿಗಳನ್ನು ಸಂಗ್ರಹಿಸಿ, ವ್ಯಾಖ್ಯಾನವನ್ನು ಮಾಡಿದವರು ಹಿಂದೂಧರ್ಮ ರಕ್ಷಣ ಸಂಸ್ಥೆಯ ಶ್ರೀ ಇ. ಕರು ಣಾಕರನ್. ಅಲ್ಲಿನ ಹಾಡುಗಳನ್ನು ಸಂಗೀತ ದೊಡನೆ ಸಂಯೋಜಿಸಿ ಹಾಡಿದವರು ಅನ್ನ ಮಾಚಾರ್ಯ ಪ್ರಾಜೆಕ್ಟಿನ ಕಲಾವಿದರಾದ ಶ್ರೀನಾಗೇಶ್ವರ ಮತ್ತಿತರರು. ಆ ಹಾಡುಗಳನ್ನು ಹಾಡುತ್ತಿದ್ದಂತೆಯೇ ಕಪ್ಪು ಹಲಗೆಯ ಮೇಲೆ ಚಿತ್ರೀಕರಿಸಿದವರು ಮ್ಯೂಸಿಕ್ ಕಾಲೇಜಿನ ಶ್ರೀ ಕೆ. ಎಂ. ಡಿ ಹೆನ್ರಿ ಅವರು. ಚಿತ್ರ ಲೇಖನ– ಸಂಗೀತ – ಸಾಹಿತ್ಯ ಸಭೆ ಅತ್ಯಂತ ಯಶಸ್ವಿ ಯಾಯಿತು.

ಅಂದು ರಾತ್ರಿ ಚಲನ ಚಿತ್ರ ಗಾಯಕಿ ಶ್ರೀಮತಿ ಎ. ಪಿ ಕೋಮಲ ಹಾಗೂ ವೃಂದದವರಿಂದ ಸಂಗೀತ ಸಭೆ ನಡೆದು ಅನ್ನಮಾಚಾರ್ಯರ ಜಯಂತಿ ಕಾರ್ಯಕ್ರಮಗಳು ಮುಕ್ತಾಯವಾ ದುವು.

# ಧಾರ್ಮಿಕ ಶಿಕ್ಷಣದ ಬೇಸಿಗೆ ಶಿಬಿರ

ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಆಶ್ರಯದಲ್ಲಿ ಪ್ರತಿ ವರ್ಷದಂತೆಯೇ ಈ ಬಾರಿಯೂ ಬೇಸಿಗೆ ಯಲ್ಲಿ ಶಿಕ್ಷಕರಿಗಾಗಿ ಧಾರ್ಮಿಕ ಶಿಕ್ಷಣ ಶಿಬಿರ ವನ್ನು ತಿರುಪತಿಯ ಶ್ರೀ ವೆಂಕಟೇಶ್ವರ ಬಾಲ ಮಂದಿರದಲ್ಲಿ ಮೇ 1 ರಿಂದ 15 ರವರೆಗೆ ನಡೆಸ ಲಾಯಿತು.

ಮೇ 1 ರಂದು ಧಾರ್ಮಿಕ ಶಿಕ್ಷಣ ಶಿಬಿರವನ್ನು ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬ ರಾಯುಲು ಅವರ ಅಧ್ಯಕ್ಷತೆಯಲ್ಲಿ ತಿರುಪತಿಯ ಕೇಂದ್ರೀಯ ಸಂಸ್ಕೃತ ವಿದ್ಯಾಶಾಲೆಯ ಪ್ರಾಂಶು ಪಾಲ ಡಾ॥ ಎಂ. ಡಿ. ಬಾಲಸುಬ್ರಹ್ಮಣ್ಯಂ ಅವರು ಉದ್ಘಾಟಿಸಿದರು.

ಆಂಧ್ರ ಪ್ರದೇಶದ ಎಲ್ಲ ಜಿಲ್ಲೆಗಳಿಂದಲೂ ಸೇರಿ 48 ಮಂದಿ ಶಿಕ್ಷಕರು ಈ ಶಿಬಿರದಲ್ಲಿ ಶಿಕ್ಷಣ ವನ್ನು ಪಡೆದರು. ಶಿಬಿರ ಪ್ರವೇಶವನ್ನು ಕೋರಿ ಬಂದ ಅಭ್ಯರ್ಥನೆಗಳು 1800 ಕ್ಕೂ ಮೀರಿದ್ದವು. ಅವರಲ್ಲಿ ಕಂಚಿ ಪೀಠಾಧಿ ಪತಿಗಳು ಆಯ್ಕೆ ಮಾಡಿ ಕಳುಹಿಸಿದ ಆರುಮಂದಿಯೊಡನೆ ಮಿಕ್ಕವರನ್ನು ಆಯ್ಕೆ ಮಾಡಲಾಯಿತು.

ಉದ್ಘಾಟನೆಯನ್ನು ಮಾಡುತ್ತ ಡಾ॥ ಎಂ. ಡಿ. ಬಾಲಸುಬ್ರಹ್ಮಣ್ಯಂ ಅವರು ನಾವು ಹಿಂದು ಗಳೆಂದು ಹೇಳಿಕೊಳ್ಳುವುದರಲ್ಲಿ ಸಂಕೋಚ ಪಡಬೇಕಾದ ಕಾರಣವೇನೂ ಇಲ್ಲವೆಂದೂ ಅದು ಹೆಮ್ಮೆಯ ವಿಷಯವೆಂದೂ, ಆದರೆ ಹಿಂದು ವಾಗಿ ಕೆಲ ಮೌಲ್ಯಗಳು, ತತ್ತ್ವಗಳನ್ನು ಪಾಲಿ ಸುವುದು ದೇಶದ ಸರ್ವಾಂಗೀಣ ಪ್ರಗತಿಗೆ ಪೋಷ ಕವಾಗುವುದೆಂದೂ ನುಡಿದರು. ಇಲ್ಲಿನ ಶಿಕ್ಷಣಾರ್ಥಿ ಗಳು ತಮ್ಮ ತಮ್ಮ ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಈ ಮೌಲ್ಯಗಳನ್ನು ಹಂಚಿ ದೇಶದ ಕ್ಷುಬ್ಧ ವಾತಾ ವರಣವನ್ನು ಹಸನುಗೊಳಿಸಬೇಕೆಂದೂ ತಿಳಿಸಿ ದರು. ಅಧ್ಯಕ್ಷ ಭಾಷಣ ಮಾಡುತ್ತ ಶ್ರೀ ಡಿ. ಸುಬ್ಬರಾಯುಲು ನಾಗರಿಕರಾಗಿ ತಿಳಿಯಲೇ ಬೇಕಾದ ಹಲವಾರು ಮಾನವೀಯ ಅಂಶಗಳನ್ನು ಶಿಕ್ಷಣಾರ್ಥಿಗಳು ಈ ಶಿಬಿರದಲ್ಲಿ ತಿಳಿದು ಅದನ್ನು ತಮ್ಮ ಶಿಷ್ಯರಲ್ಲಿ ಹರಡಬೇಕೆಂದೂ ತಿಳಿಸಿದರು. ಧರ್ಮದ ಪರಿರಕ್ಷಣೆ ಶಿಕ್ಷಕರಿಂದ ಮಾತ್ರವೇ ಸಾಧ್ಯ ಎಂದವರು ಸೂಚಿಸಿದರು.

ಮುಖ್ಯ ಅತಿಥಿಯಾಗಿ ಆಗಮಿಸಿ ಮಾತನಾ ಡಿದ ಡಾ॥ ಕರುಣಶ್ರೀ ಅವರು ಶಿಕ್ಷಕರ ಹಿರಿಮೆ ಯನ್ನು ಭಾಗವತ ಭಾರತಗಳ ಆಧಾರದಿಂದ ಮನೋಜ್ಞವಾಗಿ ವಿವರಿಸಿ, ಶಿಕ್ಷಣವನ್ನು ಪಡೆದ ಶಿಕ್ಷಕರು ಮತ್ತೂ ಹೆಚ್ಚು ತೇಜೋವಂತರಾಗಿ ಸಮಾಜವನ್ನು ಮುನ್ನಡೆಸುವಲ್ಲಿ ಮೊದಲಿಗರಾಗ ಬೇಕೆಂದೂ ಕರೆ ನೀಡಿದರು.

ತಿ. ತಿ. ದೇ. ಪೌರಸಂಬಂಧಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣಮೂರ್ತಿ ಅವರು ಮಾತನಾಡುತ್ತ ತಿ. ತಿ ದೇ. ಧರ್ಮ ಪ್ರಸಾರ ಕಾರ್ಯದಲ್ಲಿ ಮಾಡುತ್ತಿರುವ ಹಲವಾರು ಕಾರ್ಯ ವಿವರಿಸಿ, ದೇವಸ್ಥಾನಗಳು ಪ್ರಕಟಿಸುತ್ತಿರುವ ಧಾರ್ಮಿಕಗ್ರಂಥರಾಶಿಯಿಂದ ಇಲ್ಲಿನ ಶಿಕ್ಷಕರು ಸಮಾಜಕ್ಕೆ ಹೆಚ್ಚಿನ ಪ್ರಯೋಜನ ಆಗುವಂತೆ ಮಾಡುವಲ್ಲಿ ನೆರವು ನೀಡಬೇಕೆಂದರು.

ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯ ದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ಓದಿದರು.

ಹದಿನೈದು ದಿನಗಳಕಾಲ ನಡೆದ ಶಿಕ್ಷಣ ಶಿಬಿರ ದಲ್ಲಿ ಉದಯ ಕಾಲದ ಯೋಗಾಭ್ಯಾಸ ಗೀತಾಪ ಠಣ, ಪ್ರವಚನಗಳಿಂದ ಆರಂಭವಾಗಿ, ದಿನಕ್ಕೆ ಮೂವರು ವಿಶೇಷ ವಿದ್ವಾಂಸರ ಉಪನ್ಯಾಸಗ ಳಂತೆ ಸುಮಾರು ಮೂವತ್ತೈದು ಮಂದಿ ವಿದ್ವಾಂ

(38ನೇ ಪುಟ ನೋಡಿ)

# ಬೆಂಗಳೂರು ಕೋಟೆ ವೆಂಕಟರಮಣಸ್ವಾಮಿ

ವಿದ್ಯಾನಗರಿ ಕರ್ನಾಟಕದ ರಾಜಧಾನಿ ಬೆಂಗಳೂರಿನ ಇತಿಹಾಸದೊಂದಿಗೆ ಬೆರೆತಿರುವ ದೇಗುಲ, ನಗರ ಮಧ್ಯದಲ್ಲಿರುವ ಕೋಟೆ ವೆಂಕಟರಮಣಸ್ವಾಮಿ ದೇವಾಲಯ.

ಸಾಧಾರಣ ಮೂರು ಶತಮಾನದ ಇತಿಹಾಸವಿರುವ ಮೈಸೂರು ರಾಜಮನೆತನದಿಂದ ಪೋಷಿಸಲ್ಪಟ್ಟಿರುವ ಹಾಗೂ ಟಿಪ್ಪು ಸುಲ್ತಾನನ ರಕ್ಷಣೆಗೊಳಪಟ್ಟ ದೇವಸ್ಥಾನವಾದ ಇವರ ಮುಖಮಂಟಪ ಹಾಗೂ ಗರ್ಭಗುಡಿಯ ವಿನ್ಯಾಸವು ತಿರುಪತಿಯ ವೆಂಕಟೇಶ್ವರನ ಗುಡಿಯನ್ನು ಹೋಲುತ್ತಿರುವುದು ವಿಶೇಷ. ಗುಡಿಯ ವಿಮಾನದ ವಿನ್ಯಾಸದಲ್ಲಿ ಶಕ್ತಿ ಸ್ಥಾನಗಳಲ್ಲಿರುವಂತೆ ಮೂಲೆಗಳಲ್ಲಿ ಸಿಂಹಲಾಂಛನ ನಿಲ್ಲಿಸಿರುವುದು ಗಮನಿಸಬೇಕಾದ ವಿಷಯ.

ಗರ್ಭಗುಡಿಯಲ್ಲಿ ವೆಂಕಟೇಶ್ವರನ ಮೂರ್ತಿ ಮಾತ್ರವಿರುವುದು ಹಾಗೂ ಮಹಾಲಕ್ಷ್ಮಿಯ ಗುಡಿಯು ಪ್ರಾಕಾರದಲ್ಲಿ ಪ್ರತ್ಯೇಕವಾಗಿರುವುದು. ಮೂರ್ತಿಯನ್ನು ಪ್ರತಿಷ್ಠಾಪಿಸಿದವರ ಮೇಲೆ ತಿರುಪತಿಯ ಪ್ರಭಾವ ಬಿದ್ದಿರುವುದು ಸ್ಪಷ್ಟ. ಮುಖಮಂಟಪ ಹಾಗೂ ಎದುರುಗಡೆಯ ಧ್ವಜಸ್ಥಂಭ ಇವುಗಳು ತಿರುಪತಿಯ ಪ್ರತಿಕೃತಿಗಳೆಂದರೆ ತಪ್ಪಾಗಲಾರದು. ವೆಂಕಟೇಶ್ವರನ ಗುಡಿಯ ವಾಯುವ್ಯ ಮೂಲೆಯಲ್ಲಿ, ಕೂತಿರುವ ಭಂಗಿಯ ಮಹಾಲಕ್ಷ್ಮಿಯ ನಯನ ಮನೋಹರ ಮೂರ್ತಿಯ ಪ್ರತ್ಯೇಕ ಗುಡಿಯಲ್ಲಿದೆ. ಈಶಾನ್ಯ ಮೂಲೆಯಲ್ಲಿ 'ಸ್ವರ್ಗದ ಬಾಗಿಲೆಂಬ' ಎತ್ತರದ ಮಹಾದ್ವಾರವೊಂದಿದೆ. ವೈಕುಂಠ ಏಕಾದಶಿಯಂದು ಭಕ್ತಾದಿಗಳು ಸಾಧಾರಣ ಮೈಲುದ್ದದ ಸರತಿಯಲ್ಲಿ ನಿಂತು ವೆಂಕಟೇಶ್ವರನ ದರ್ಶನ ಮಾಡಿ ಸ್ವರ್ಗದ ಬಾಗಿಲ ಮೂಲಕ ಹಾದು ಹೋಗುವುದು ಸಂಪ್ರದಾಯ. ಇತ್ತೀಚೆಗೆ ಭಕ್ತಾದಿಗಳ ನೆರವಿನಿಂದ ಮಹಾದ್ವಾರದ ಮೇಲೆ ಆಕರ್ಷಕವಾದ ಗೋಪುರವನ್ನು ಕಟ್ಟಲಾಗಿದೆ.

ಸುಂದರ ದೇವತಾ ವಿಗ್ರಹವನ್ನು ಹೊಂದಿರುವ ಈ ದೇಗುಲದ ಐತಿಹಾಸಿಕ ಹಿನ್ನೆಲೆಯನ್ನು ಕೆದಕಿದಾಗ ಹಾಗೂ ಶಾಸನದ ಮೂಲವನ್ನು ಹುಡುಕಿದಾಗ ಗೋಚರಿಸುವ ವಿಷಯಗಳು ಎಂದರೆ ಕ್ರಿ. ಶ. 1705 ರಲ್ಲಿ ನಗರಕ್ಕೆ ಸಮೀಪವಿರುವ ಬೇಗೂರು ಹೋಬಳಿ ಕೊತ್ತನೂರು ಗ್ರಾಮದಲ್ಲಿ ಕಲ್ಲಿನಲ್ಲಿ ಕೆತ್ತಿರುವ ಶಾಸನದ ಒಕ್ಕಣೆಯಂತೆ "ಕಂಠೀರವ ನರಸರಾಜ ಒಡೇರಯ್ಯನವರು ಶ್ರೀರಂಗಪಟ್ಟಣದ ಸಿಂಹಾಸನಾರೂಢರಾಗಿ ಪೃಥುವಿ ಸಾಮ್ರಾಜ್ಯವನ್ನಾಳುತ್ತಿದ್ದಾಗ ತಮ್ಮ ಆಳ್ವಿಕೆಗೊಳಪಟ್ಟಿದ್ದ ಬೆಂಗಳೂರು ಕೋಟೆ ಒಳಗೆ ತಂಮ ಅಪ್ಪಾಜಿಯವರು ನೂತನವಾಗಿ ಪ್ರತಿಷ್ಠಿಸಿದಂತಾ ವೆಂಕಟೇಶ್ವರ ಸ್ವಾಮಿಯವರ ಪಡಿತರ ದೀಪಾರಾಧನೆಗೆ" ಗ್ರಾಮವನ್ನು ಬಿಟ್ಟು ಕೊಟ್ಟಿರುವುದು ಕಂಡು ಬರುತ್ತದೆ. ಅಲ್ಲಿಗೆ ಸುಪ್ರಸಿದ್ಧ ಚಿಕ್ಕದೇವರಾಜ ಒಡೆಯರ್‌ರವರು ಪ್ರತಿಷ್ಠಾಪಿಸಿದ ದೇವಸ್ಥಾನವಿದೆಂದು ಸ್ಪಷ್ಟ. ಆಗ ಮೊಗಲರ ವಶದಲ್ಲಿದ್ದ ಬೆಂಗಳೂರನ್ನು ಚಿಕ್ಕದೇವರಾಜ ಒಡೆಯರ್‌ರ ಮೂರು ಲಕ್ಷ ರೂಪಾಯಿಗಳಿಗೆ ಖರೀದಿಸಿ ಮೈಸೂರು ಸಂಸ್ಥಾನಕ್ಕೆ ಸೇರಿಸಿ ಕೊಂಡಿದ್ದರು. (1687) ಚಿಕ್ಕದೇವರಾಜ ಒಡೆಯರ್ ರವರ ನಂತರ ಸಂಸ್ಥಾನವನ್ನಾಳಿದ ಮೈಸೂರು ರಾಜರಲ್ಲಿ ಈ ವೆಂಕಟೇಶ್ವರ ದೇಗುಲಕ್ಕೆ ಸಂಬಂಧಿಸಿದಂತೆ ಯಾವುದೇ ಶಾಸನಗಳಿಲ್ಲ.

ಮೈಸೂರು ರಾಜ್ಯಾಡಳಿತವು ರಾಜರ ವಂಶದಿಂದ ಹೈದರಾಲಿಗೆ (1761–1782) ವರ್ಗಾಯಿಸಲ್ಪಟ್ಟನಂತರ ಆತ ಬೆಂಗಳೂರಿನಲ್ಲಿ ತಮಗಾಗಿ ಅರಮನೆಯೊಂದನ್ನು ಕಟ್ಟಿಸಿದ. ಇಮ್ಮಡಿ ಕೃಷ್ಣದೇವರಾಜ ಒಡೆಯರು ರಾಜರಾಗಿದ್ದಾಗ (1759) ಹೈದರಾಲಿಯ ಸೇವೆಯನ್ನು ಮೆಚ್ಚಿ ಬೆಂಗಳೂರನ್ನು ಜಹಗೀರಿಯಾಗಿ ನೀಡಿದ್ದರು. ಆತನೇ ರಾಜನಾದ ನಂತರ ಬೆಂಗಳೂರಿನಲ್ಲಿರುವ ಸಲುವಾಗಿ ಅರಮನೆಯೊಂದನ್ನು ಈ ವೆಂಕಟೇಶ್ವರ ಗುಡಿಯ ಹಿಂಭಾಗದಲ್ಲಿ ಭವ್ಯವಾಗಿ ನಿರ್ಮಿಸಿದ. ಇಂದಿಗೂ ಅರಮನೆಯ ಸ್ವಲ್ಪಭಾಗ ಹಾಗೇ ಇದೆ. ಇದರ ಸುತ್ತ ಮುತ್ತ ಪರಿವಾರದಲ್ಲಿ ವಿಧರ್ಮೀಯರು ಹೆಚ್ಚಿದ್ದರೂ ಗುಡಿಯ ಭವ್ಯತೆಗೆ ಹಾಗೂ ಪೂಜಾ ವಿನಿಯೋಗಕ್ಕೆ ಭಂಗ ಬರದಿದ್ದುದು ವಿಶೇಷ.

ಮೂರನೆಯ ಮೈಸೂರು ಸಮರ (1790-92) ದಲ್ಲಿ ಸಾಕ್ಷೀ ರೂಪದಲ್ಲಿ ಭಾಗವಹಿಸಿದ



**ಶ್ರೀ ಕೆ. ಸೂರ್ಯ ನಾರಾಯಣರಾವ್**

ವೆಂಕಟೇಶ್ವರಗುಡಿಯ ಧ್ವಜಸ್ಥಂಭದಲ್ಲಿ ಆಂಗ್ಲರ ಗುಂಡು ಬಡಿದ ಹಾಗೂ ಅದ ರಿಂದಾಗಿ ಚಿಪ್ಪೆದ್ದ ಗುರುತು ಇಂದಿಗೂ ನೋಡಬಹುದು. ಆಂಗ್ಲ ವೈಸರಾಯ ಕಾರ್ನವಾಲಿಸನ ಆಣತಿಯಂತೆ ಜನರಲ್ ಮೆಡೋಸ್ ಹಾಗೂ ಕರ್ನಲ್ ಮೂರ್ ಹೌಸ್ 1791 ಮಾರ್ಚ್ 21ರ ಮಧ್ಯರಾತ್ರಿ ಯಲ್ಲಿ ಟಿಪ್ಪುವಿನ ಅರಮನೆಯನ್ನು ಮುತ್ತಿ ದ್ದರು. ಆಗ ನಡೆದ ಬಿರುಸಿನ ಸಮರದಲ್ಲಿ ಮೇಲ್ಮಾಣಿಸಿದ ಘಟನೆ ನಡೆಯಿತು. ಸಾಧಾ ರಣ ಒಂದುವಾರ ಕಾಲ ಇದಕ್ಕೆ ಸಮೀಪವೇ ಸಮರ ನಡೆದರೂ ಗುಡಿಗೆ ಯಾವ ತೊಂದ ರೆಯೂ ಆಗದಿದ್ದದು ದೈವತ್ವಕ್ಕೆ ಸಾಕ್ಷಿ. ಆನಂತರ ಒಂದು ವರ್ಷಕಾಲ ಆಂಗ್ಲರ ಕೈಯಲ್ಲಿದ್ದ ಬೆಂಗಳೂರನ್ನು 1792ರ ಶ್ರೀರಂಗ ಪಟ್ಟಣದ ಕರಾರಿನಂತೆ ಟಿಪ್ಪುವಿಗೆ ಹಿಂತಿ ರುಗಿಸಲಾಯಿತು. 1799 ರ ಟಿಪ್ಪುವಿನ ಮರ ಣಾನಂತರ ರಾಜ್ಯಾಡಳಿತವನ್ನು ಪುನಃ ರಾಜವಂಶದ ಮುಮ್ಮಡಿ ಕೃಷ್ಣರಾಜ ಒಡೆ ಯರರಿಗೆ ಒಪ್ಪಿಸಲಾಯಿತು

ಈ ಎಲ್ಲಾ ಏರುಪೇರುಗಳು ಬೆಂಗಳೂರಿ ನಲ್ಲಿ ನಡೆದರೂ ಒಂದು ದಿವಸವೂ ವೆಂಕಟೇ ಶ್ವರನ ಪೂಜಾಕಾರ್ಯಕ್ಕೆ ವಿಘ್ನ ಬರದಿ ದ್ದುದು ಇಲ್ಲಿನ ಭಗವತ್ಸಾನ್ನಿಧ್ಯದ ಕುರುಹು.

ಸಾಧಾರಣ ಮೂರಡಿ ಎತ್ತರದ ವೆಂಕಟೇ ಶ್ವರ ಮೂರ್ತಿಯು ಭಾವುಕರ ಮನ ಸೆಳೆಯುವಷ್ಟು ತೇಜಃಪುಂಜವಾಗಿದೆ. ಬೆಂಗಳೂರು ಸಾಕಷ್ಟು ಬೆಳೆದಿದ್ದು ಅಕ್ಕಪಕ್ಕ ದಲ್ಲಿ ಆಸ್ಪತ್ರೆ. ಮೆಡಿಕಲ್ ಕಾಲೇಜು ಇತ್ಯಾ ದಿಗಳಿಂದ ಆವೃತವಾಗಿದ್ದರೂ ವೆಂಕಟೇಶ್ವರನ ಭಕ್ತರ ಸಂಖ್ಯೆ ದಿನೇ ದಿನೇ ವೃದ್ಧಿಸುತ್ತಿರು ವುದು ಕೋಟಿ ವೆಂಕಟರಮಣಸ್ವಾಮಿಯು ಬೆಂಗಳೂರಿನ ಅಭಿಮಾನಿ ದೇವತೆಯೆಂಬ ನಂಬಿಕೆಯನ್ನು ಸಾರ್ಥಕಗೊಳಿಸಿದೆ.

★

# ಶ್ರೀಮದ್ಭಗವದ್ಗೀತೆ

## ೧೩ ನೆಯ ಅಧ್ಯಾಯ

## ಕ್ಷೇತ್ರ ಮತ್ತು ಕ್ಷೇತ್ರಜ್ಞ

ಶ್ರೀಭಗವಾನುವಾಚ–

ಇದಂ ಶರೀರಂ ಕೌಂತೇಯ
ಕ್ಷೇತ್ರಮಿತ್ಯಭಿಧೀಯತೇ ।
ಏತತ್ ಯೋ ವೇತ್ತಿ ತಂ ಪ್ರಾಹುಃ
ಕ್ಷೇತ್ರಜ್ಞ ಇತಿ ತದ್ವಿದಃ ॥ 1

ಶ್ರೀಕೃಷ್ಣ : ಅರ್ಜುನ, ಈ ಶರೀರವೇ ಕ್ಷೇತ್ರ ಎಂದು ಕರೆಸಿಕೊಳ್ಳಲ್ಪಡುತ್ತದೆ. ಈ ಕ್ಷೇತ್ರದ ರಹಸ್ಯವನ್ನು ಬಲ್ಲವನೆ ಕ್ಷೇತ್ರಜ್ಞ ಎಂದು ಬಲ್ಲವರು ಹೇಳುತ್ತಾರೆ.

ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ
ಸರ್ವಕ್ಷೇತ್ರೇಷು ಭಾರತ ।
ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ
ಯತ್ ತದ್ ಜ್ಞಾನಂ ಮತಂ ಮಮ ॥ 2

ಓ ಅರ್ಜುನ, ಎಲ್ಲ ಶರೀರಗಳಲ್ಲಿಯೂ ನೆಲಸಿರುವ ನನ್ನನ್ನೆ ಕ್ಷೇತ್ರಜ್ಞನೆಂದು ತಿಳಿ. ಈ ಶರೀರವೆಂಬ ಕ್ಷೇತ್ರ ಮತ್ತು ಇದರಲ್ಲಿ ನೆಲಸಿರುವ ಕ್ಷೇತ್ರಜ್ಞ–ಇವರ ಅರಿವೆ ನನ್ನ ನಿಜವಾದ ಅರಿವು.

ತತ್ ಕ್ಷೇತ್ರಂ ಯಚ್ಚ ಯಾದೃಕ್ ಚ
ಯದ್ವಿಕಾರಿ ಯತಶ್ಚ ಯತ್ ।
ಸ ಚ ಯೋ ಯತ್ಪ್ರಭಾವಶ್ಚ
ತತ್ ಸಮಾಸೇನ ಮೇ ಶೃಣು ॥ 3

ಈ ಕ್ಷೇತ್ರವೆಂದರೇನು? ಎಂಥದು? ಇದರ ವಿಕಾರಗಳು ಯಾವುವು? ಇದರ ಪ್ರವರ್ತಕನು ಯಾರು? ಅವನ ಶಕ್ತಿ ಸಾಮರ್ಥ್ಯಗಳೇನು? ಈ ಎಲ್ಲ ಸಂಗತಿಯನ್ನು ಸಂಕ್ಷೇಪವಾಗಿ ನನ್ನಿಂದ ಕೇಳು.

ಋಷಿಭಿರ್ಬಹುಧಾ ಗೀತಂ
ಛಂದೋಭಿರ್ವಿವಿಧೈಃ ಪೃಥಕ್ ।
ಬ್ರಹ್ಮಸೂತ್ರಪದೈಶ್ಚೈವ
ಹೇತುಮದ್ಭಿರ್ವಿನಿಶ್ಚಿತೈಃ ॥ 4

ಬಹುವಿಧವಾದ ಅನೇಕ ಶ್ರುತಿವಚನಗಳು ಈ ಒಂದೊಂದನ್ನೂ ಪ್ರತ್ಯೇಕವಾಗಿ ಬಹು ವಿಧವಾಗಿ ಬಣ್ಣಿಸಿವೆ. ವೇದಾರ್ಥನಿರ್ಣಾಯಕಗಳಾದ ಬ್ರಹ್ಮಸೂತ್ರಗಳೂ ಇವನ್ನು ಯುಕ್ತಿಯುಕ್ತವಾಗಿ ಸಾಧಿಸಿವೆ.

ಮಹಾಭೂತಾನ್ಯಹಂಕಾರೋ
ಬುದ್ಧಿರವ್ಯಕ್ತಮೇವ ಚ ।
ಇಂದ್ರಿಯಾಣಿ ದಶೈಕಂ ಚ
ಪಂಚ ಚೇಂದ್ರಿಯಗೋಚರಾಃ ॥ 5

ಇಚ್ಛಾ ದ್ವೇಷಃ ಸುಖಂ ದುಃಖಂ
ಸಂಘಾತಶ್ಚೇತನಾ ಧೃತಿಃ ।
ಏತತ್ ಕ್ಷೇತ್ರಂ ಸಮಾಸೇನ
ಸವಿಕಾರಮುದಾಹೃತಮ್ ॥ 6

ಅವ್ಯಕ್ತವಾದ ಮೂಲ ಪ್ರಕೃತಿ, ಅಹಂಕಾರ ತತ್ತ್ವ, ಬುದ್ಧಿ, ಪಂಚಮಹಾಭೂತಗಳು, ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಸೇರಿ ಹನ್ನೊಂದು ಇಂದ್ರಿಯಗಳು. ಇಂದ್ರಿಯ ವಿಷಯಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು, ಇಚ್ಛೆ, ದ್ವೇಷ, ಸುಖ, ದುಃಖ, ಇವೆಲ್ಲವುಗಳ ಸಮಷ್ಟಿಯಾದ ದೇಹ, ಸ್ಮೃತಿ, ಧೃತಿ–ಇವೆಲ್ಲ ಕ್ಷೇತ್ರ ಎನ್ನಿಸಿದ ಶರೀರ ಮತ್ತು ಅದರ ವಿಕಾರಗಳ ಸಂಕ್ಷಿಪ್ತ ಚಿತ್ರಣ.

ಅಮಾನಿತ್ವಮದಂಭಿತ್ವಂ
ಅಹಿಂಸಾ ಕ್ಷಾಂತಿರಾರ್ಜವಮ್ ।



ಆಚಾರ್ಯೋಪಾಸನಂ ಶೌಚಂ
ಸ್ಥೈರ್ಯಮಾತ್ಮವಿನಿಗ್ರಹಃ ॥ 7

ಇಂದ್ರಿಯಾರ್ಥೇಷು ವೈರಾಗ್ಯಂ
ಅನಹಂಕಾರ ಏವ ಚ ।
ಜನ್ಮಮೃತ್ಯುಜರಾವ್ಯಾಧಿ
ದುಃಖ ದೋಷಾನುದರ್ಶನಮ್ ॥ 8

ಅಸಕ್ತಿರನಭಿಷ್ವಂಗಃ
ಪುತ್ರದಾರಗೃಹಾದಿಷು ।
ನಿತ್ಯಂ ಚ ಸಮಚಿತ್ತತ್ವಂ
ಇಷ್ಟಾನಿಷ್ಟೋಪಪತ್ತಿಷು ॥ 9

ಮಯಿ ಚಾನನ್ಯಯೋಗೇನ
ಭಕ್ತಿರವ್ಯಭಿಚಾರಿಣೀ ।
ವಿವಿಕ್ತದೇಶಸೇವಿತ್ವಂ
ಅರತಿರ್ಜನಸಂಸದಿ ॥ 10

ಅಧ್ಯಾತ್ಮಜ್ಞಾನನಿತ್ಯತ್ವಂ
ತತ್ತ್ವಜ್ಞಾನಾರ್ಥದರ್ಶನಮ್ ।
ಏತದ್ ಜ್ಞಾನಮಿತಿ ಪ್ರೋಕ್ತಂ
ಅಜ್ಞಾನಂ ಯದತೋಽನ್ಯಥಾ ॥ 11

ಮಾನ – ಸಮ್ಮಾನಗಳ ಬೆನ್ನುಹತ್ತದೆ ಇರುವುದು, ಇಲ್ಲದ ದೊಡ್ಡಸ್ತಿಕೆಯನ್ನು ಪ್ರದರ್ಶಿಸುವ ಡಾಂಭಿಕತೆಯಿಂದ ದೂರಾಗಿರುವುದು, ಅಹಿಂಸೆ, ಸಹನೆ, ನಡೆನುಡಿಯಲ್ಲಿ ಏಕರೂಪತೆ, ಗುರುಗಳ ಸೇವೆ, ಮೈಮನಸ್ಸುಗಳ ಶುದ್ಧಿ, ಮನಸ್ಸಿನಲ್ಲಿ ದಾರ್ಢ್ಯ, ಇಂದ್ರಿಯಗಳ ನಿಗ್ರಹ, ಇಂದ್ರಿಯ ವಿಷಯಗಳ ಬಗ್ಗೆ ಅನಾಸಕ್ತಿ, ಹೆಮ್ಮೆ ಪಡದೆ ಇರುವುದು, ಹುಟ್ಟು–ಸಾವು–ಮುಪ್ಪು ಕಾಯಿಲೆಗಳಿಂದ ದುಃಖಮಯವಾದ ಬದುಕಿನ ದೋಷಗಳ ಅರಿವು, ಯಾವುದನ್ನೂ ಹಚ್ಚಿಕೊಳ್ಳದೆ ಇರುವುದು, ಮಕ್ಕಳು–ಹೆಂಡತಿ–ಮನೆ ಮುಂತಾದವುಗಳಲ್ಲಿ ಮೈಮರೆಯದೆ ಇರುವುದು, ಒಳಿತು–ಕೆಡುಕುಗಳ ಬಗ್ಗೆ ಸದಾ ಸಮದೃಷ್ಟಿ, ನನ್ನಲ್ಲಿ (ಭಗವಂತನಲ್ಲಿ) ಅನನ್ಯವಾದ–ಯಾವ ಕಾಲಕ್ಕೂ ವಿಚಲವಾಗದ ಭಕ್ತಿ, ಏಕಾಂತದಲ್ಲಿ ವಾಸಿಸುವುದು, ಜನರ ಗುಂಪು–ಗದ್ದಲಗಳಲ್ಲಿ ಆಸಕ್ತಿ ಇಲ್ಲದೆ ಇರುವುದು, ನಿತ್ಯವೂ ಅಧ್ಯಾತ್ಮದ ಅರಿವಿನ ಹಸಿವು ಮತ್ತು ತತ್ತ್ವದ ಅರಿವಿಗಾಗಿ ಸದಾ ಸಚ್ಛಾಸ್ತ್ರಗಳ ಅವಲೋಕನ–ಇದೇ ಅರಿವಿನ ದಾರಿ, ಇದಕ್ಕೆ ವಿಪರೀತವಾದದ್ದೇ ಅಜ್ಞಾನದ ದಾರಿ.

ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ
ಯದ್ ಜ್ಞಾತ್ವಾಽಮೃತಮಶ್ನುತೇ ।
ಅನಾದಿಮತ್ ಪರಂ ಬ್ರಹ್ಮ
ನ ಸತ್ ತನ್ನಾಸದುಚ್ಯತೇ ॥ 12

ಇನ್ನು ಈ ಜ್ಞಾನಮಾರ್ಗದಲ್ಲಿ ಸಾಗಿ ತಿಳಿಯಬೇಕಾದ್ದನ್ನು, ಯಾವುದನ್ನು ತಿಳಿದಾಗ ಮರ್ತ್ಯ ಅಮರ್ತ್ಯನಾಗುವನೋ ಅಂಥ ಜ್ಞೇಯವನ್ನು ಹೇಳುವೆನು. ಆದಿ – ಅಂತವಿರದ ಪರಬ್ರಹ್ಮವೇ ತಿಳಿಯಬೇಕಾದದ್ದು. ಅದು ಸತ್ ಎನ್ನಿಸಿದ ಈ ಕಾರ್ಯಪ್ರಪಂಚಕ್ಕಿಂತಲು, ಅಸತ್ ಎನ್ನಿಸಿದ ಪ್ರಕೃತಿತತ್ತ್ವಕ್ಕಿಂತಲು ಅತೀತವಾಗಿದೆ.

ಸರ್ವತಃಪಾಣಿಪಾದಂ ತತ್
ಸರ್ವತೋಽಕ್ಷಿ ಶಿರೋಮುಖಮ್ ।
ಸರ್ವತಃ ಶ್ರುತಿಮಲ್ಲೋಕೇ
ಸರ್ವಮಾವೃತ್ಯ ತಿಷ್ಠತಿ ॥ 13

ಅದಕ್ಕೆ ಎಲ್ಲೆಡೆಯು ಕೈಕಾಲುಗಳು, ಎಲ್ಲೆಡೆಯು ಕಣ್ಣು–ತಲೆ–ಬಾಯಿಗಳು, ಲೋಕದ ಎಲ್ಲೆಡೆಯು ಅದು ಕಿವಿಗೊಟ್ಟು ನಿಂತಿದೆ. ಏಕೆಂದರೆ ಅದು ಎಲ್ಲೆಡೆಯೂ ಎಲ್ಲವನ್ನೂ ವ್ಯಾಪಿಸಿ ನಿಂತಿದೆ.

ಸರ್ವೇಂದ್ರಿಯಗುಣಾಭಾಸಂ
ಸರ್ವೇಂದ್ರಿಯ ವಿವರ್ಜಿತಮ್ ।
ಅಸಕ್ತಂ ಸರ್ವಭೃಚ್ಚೈವ
ನಿರ್ಗುಣಂ ಗುಣಭೋಕ್ತೃ ಚ ॥ 14

ಅದಕ್ಕೆ ನಮ್ಮಂತೆ ಭೌತಿಕವಾದ ಯಾವ ಇಂದ್ರಿಯಗಳೂ ಇಲ್ಲ; ಆದರೆ ಎಲ್ಲ ಇಂದ್ರಿಯಗಳೂ ಎಲ್ಲ ವಿಷಯಗಳೂ ಪ್ರತೀತವಾಗುವುದು ಅದರಿಂದಲೇ. ಅದಕ್ಕೆ ಯಾವುದರ ಲೋಪವೂ ಇಲ್ಲ; ಆದರೆ ಅದು ಎಲ್ಲವನ್ನೂ ಧರಿಸಿಕೊಂಡಿದೆ. ಅದು ಗುಣಾತೀತವಾಗಿದೆ; ಆದರೆ ಎಲ್ಲ ಸದ್ಗುಣಗಳ ಸೆಲೆಯಾಗಿದೆ.

ಬಹಿರಂತಶ್ಚ ಭೂತಾನಾಂ
ಅಚರಂ ಚರಮೇವ ಚ ।
ಸೂಕ್ಷ್ಮತ್ವಾತ್ ತದವಿಜ್ಞೇಯಂ
ದೂರಸ್ಥಂ ಚಾಂತಿಕೇ ಚ ತತ್ ॥ 15

ಅದು ಎಲ್ಲ ಪ್ರಾಣಿಗಳ ಒಳಗೂ ಇದೆ; ಹೊರಗೂ ಇದೆ. ಅದು ಚಲಿಸದೆ ನಿಂತಿದೆ ಮತ್ತು ಎಲ್ಲೆಡೆಯು ಚಲಿಸುತ್ತಿದೆ. ಯೋಗಿಗಳಿಂದ ಜ್ಞೇಯವಾದ ಈ ತತ್ತ್ವವೇ ಸೂಕ್ಷ್ಮವಾದುದರಿಂದ ಅಜ್ಞೇಯವೂ ಆಗಿದೆ. ಅರಿಯದವರಿಗೆ ಅದು ದೂರದಲ್ಲಿದೆ; ಅರಿತವರಿಗೆ ಬಳಿಯಲ್ಲೇ ಇದೆ.

ಅವಿಭಕ್ತಂ ಚ ಭೂತೇಷು
ವಿಭಕ್ತಮಿವ ಚ ಸ್ಥಿತಮ್ ।
ಭೂತಭರ್ತೃ ಚ ತಜ್ಜ್ಞೇಯಂ
ಗ್ರಸಿಷ್ಣು ಪ್ರಭವಿಷ್ಣು ಚ ॥

ಅದು ನಾನಾ ಪ್ರಾಣಿಗಳಲ್ಲಿ ನಾನಾ ರೂಪಗಳಿಂದಿದ್ದರೂ ಎಲ್ಲ ರೂಪಗಳಲ್ಲೂ ಅಭಿನ್ನವಾಗಿ ಏಕರೂಪವಾಗಿದೆ. ಆ ಬ್ರಹ್ಮವು ಜಗತ್ತಿಗೆ ಆಧಾರ, ಜಗತ್ತಿನ ಸಂಹಾರ ಶಕ್ತಿಯೂ ಅದೇ. ಜಗತ್ತನ್ನು ಮತ್ತೆ ಸೃಷ್ಟಿಸುವಂಥದೂ ಅದೇ ಎಂದು ತಿಳಿಯಬೇಕು.

ಜ್ಯೋತಿಷಾಮಪಿ ತಜ್ಜ್ಯೋತಿಃ
ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ
ಹೃದಿ ಸರ್ವಸ್ಯ ವಿಷ್ಠಿತಮ್ ॥ 17

ಅದು ಬೆಳಗುವ ವಸ್ತುಗಳಿಗೆಲ್ಲ ಬೆಳಕನ್ನು ಕೊಡುವಂಥದು. ಅಜ್ಞಾನದ ಕತ್ತಲೆಯ ಆಚೆಗಿರುವಂಥದು. ಜ್ಞಾನಸ್ವರೂಪವಾದದ್ದು. ಎಲ್ಲರೂ ತಿಳಿಯಬೇಕಾದದ್ದು. ಭಕ್ತರ ತಿಳಿವಿಗೆ ನಿಲುಕುವಂಥದು ಮತ್ತು ಎಲ್ಲರ ಹೃದಯದಲ್ಲು ನೆಲೆಸಿರುವಂಥದ್ದು.

ಇತಿ ಕ್ಷೇತ್ರಂ ತಥಾ ಜ್ಞಾನಂ
ಜ್ಞೇಯಂ ಚೋಕ್ತಂ ಸಮಾಸತಃ ।
ಮದ್ಭಕ್ತ ಏತದ್ವಿಜ್ಞಾಯ
ಮದ್ಭಾವಾಯೋಪಪದ್ಯತೇ ॥ 18

ಹೀಗೆ ಕ್ಷೇತ್ರವನ್ನೂ, ಜ್ಞಾನವನ್ನೂ, ತಿಳಿಯಬೇಕಾದುದನ್ನೂ, ಸ್ವಲ್ಪದರಲ್ಲಿ ಹೇಳಿದ್ದಾಯಿತು. ಇದನ್ನು ತಿಳಿದ ನನ್ನ ಭಕ್ತನು ನನ್ನನ್ನು ಪಡೆಯಲು ಅರ್ಹನಾಗುತ್ತಾನೆ.

ಪ್ರಕೃತಿಂ ಪುರುಷಂ ಚೈವ
ವಿದ್ಧ್ಯನಾದೀ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ
ವಿದ್ಧಿ ಪ್ರಕೃತಿಸಂಭವಾನ್ ॥ 19

ಪ್ರಕೃತಿ – ಪುರುಷ ಇಬ್ಬರೂ ಆದಿ ಇಲ್ಲದವರೆಂದು ತಿಳಿ. ತ್ರಿಗುಣಗಳನ್ನು ಮತ್ತು ಈ ಎಲ್ಲ ಸೃಷ್ಟಿಯ ವಿಕಾರಗಳನ್ನು ಮೂಲ ಪ್ರಕೃತಿಯಿಂದಲೆ ಉದಿಸಿದವು ಎಂದು ತಿಳಿ.

ಕಾರ್ಯಕಾರಣಕರ್ತೃತ್ವೇ
ಹೇತುಃ ಪ್ರಕೃತಿರುಚ್ಯತೇ ।
ಪುರುಷಃ ಸುಖದುಃಖಾನಾಂ
ಭೋಕ್ತೃತ್ವೇ ಹೇತುರುಚ್ಯತೇ ॥ 20

ದೇಹವೂ ಇಂದ್ರಿಯಗಳೂ ಆಗಿರುವುದಕ್ಕೆ ಪ್ರಕೃತಿಯು ಕಾರಣವೆನಿಸುವುದು. ಸುಖ ದುಃಖಗಳ ಅನುಭವಕ್ಕೆ ಪುರುಷನು ಕಾರಣವೆನಿಸುವನು.

ಪುರುಷಃ ಪ್ರಕೃತಿಸ್ಥೋ ಹಿ
ಭುಂಕ್ತೇ ಪ್ರಕೃತಿಜಾನ್ ಗುಣಾನ್ ।
ಕಾರಣಂ ಗುಣಸಂಗೋಽಸ್ಯ
ಸದಸದ್ಯೋನಿಜನ್ಮಸು ॥ 21

ಜೀವನು ಪ್ರಕೃತಿಬದ್ಧನಾಗಿ ಪ್ರಕೃತಿಯಿಂದುಂಟಾದ ಗುಣಗಳನ್ನು ಅನುಭವಿಸುತ್ತಾನೆ. ಇವನು ಒಳ್ಳೆ ಮತ್ತು ಕೆಟ್ಟ ಬಸಿರುಗಳಲ್ಲಿ ಬರುವುದಕ್ಕೆ ಈ ತ್ರಿಗುಣಗಳ ಬಂಧವೇ ಕಾರಣ.

ಉಪದ್ರಷ್ಟಾನುಮಂತಾ ಚ
ಭರ್ತಾ ಭೋಕ್ತಾ ಮಹೇಶ್ವರಃ ।
ಪರಮಾತ್ಮೇತಿ ಚಾಪ್ಯುಕ್ತೋ
ದೇಹೇಽಸ್ಮಿನ್ ಪುರುಷಃ ಪರಃ ॥ 22

ಎತ್ತರದಲ್ಲಿದ್ದು ಎಲ್ಲವನ್ನೂ ಸಾಕ್ಷಿಯಾಗಿ ನೋಡುವವನು, ಎಲ್ಲವನ್ನೂ ಪ್ರೇರಿಸುವವನು, ಪೋಷಿಸುವವನು, ಶುಭಫಲವನ್ನು ಭೋಗಿಸುವವನು ಮತ್ತು ಎಲ್ಲರ ಒಡೆಯನಾಗಿ ಇರುವವನೇ ಪರಮಾ

(33ನೇ ಪುಟ ನೋಡಿ)

## ಪ್ರತ್ಯೇಕ ಕಲ್ಯಾಣೋತ್ಸವ

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

ಆರ್ಜಿತ ಕಲ್ಯಾಣೋತ್ಸವ ಮಾಡಿಸುವ ಆಸಕ್ತ ಭಕ್ತರಿಗೆ ಮತ್ತೊಂದು ಸುವಾರ್ತೆ ಎಂದರೆ; ಕಲ್ಯಾಣೋತ್ಸವವನ್ನು ರೂ. 500–00 ಶುಲ್ಕದಲ್ಲಿ ನಡೆಸುವ ಕ್ರಮವನ್ನು ಜಾರಿಗೆ ತರಲಾಗಿರುವುದು. ಇದರಲ್ಲಿ ಗೃಹಸ್ಥರನ್ನೂ ಸೇರಿಸಿ ಐದು ಜನರಿಗೆ ಮಾತ್ರ ಪ್ರವೇಶ. ಮಿಕ್ಕಂತೆ ಎಲ್ಲವೂ ರೂ. 2000–00 ಕಲ್ಯಾಣೋತ್ಸವದಂತೆಯೇ.

ಆಸ್ತಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿ.

**ತಿ. ತಿ. ದೇ.**

# ಶ್ರೀವಿಷ್ಣುಚಿತ್ತರು

ಮಿಥುನೇ ಸ್ವಾತಿಜಂ ವಿಷ್ಣೋಃ
ರಥಾಂಶಂ ಧನ್ವಿನಃ ಪುರೇ ।
ಪ್ರಪದ್ಯೇ ಶ್ವಶುರಂ ವಿಷ್ಣೋಃ
ವಿಷ್ಣುಚಿತ್ತಂ ಪುರಶ್ಶಿಖಂ ॥

ಗುರುಮುಖ ಮನಧೀತ್ಯ
ಪ್ರಾಹ ವೇದಾನಶೇಷಾನ್ ।
ನರಪತಿ ಪರಿಕ್ಲುಪ್ತಂ
ಶುಲ್ಕಮಾದಾತು ಕಾಮಃ ॥

ಶ್ವಶುರಮಮರವನ್ದ್ಯಂ
ರಂಗನಾಥಸ್ಯ ಸಾಕ್ಷಾತ್ ।
ದ್ವಿಜಕುಲ ತಿಲಕಂ ತಂ
ವಿಷ್ಣುಚಿತ್ತಂ ನಮಾಮಿ ॥

ಶ್ರೀವೈಷ್ಣವ ಗುರು ಪರಂಪರೆಯಲ್ಲಿ ಬಹು ಪ್ರಸಿದ್ಧರಾದವರು ಪೆರಿಯಾಳ್ವಾರರು. ಇವರಿಗೆ ಶ್ರೀವಿಷ್ಣುಚಿತ್ತರು ಎಂಬುವ ಹೆಸರೂ ಉಂಟು. ಆ ಮಹಾನುಭಾವರನ್ನು ನೆನೆಸಿಕೊಳ್ಳುವಾಗ ಮೇಲಿನ ಶ್ಲೋಕಗಳನ್ನು ಅನುಸಂಧಾನ ಮಾಡುವ ಸಂಪ್ರದಾಯ ಉಂಟು. ಶ್ರೀವಿಲ್ಲಿಪುತ್ತೂರಿನಲ್ಲಿ ಕಲ್ಯಬ್ದ 47 ನೆಯ ಕ್ರೋಧಿನಾಮ ಸಂವತ್ಸರ ಜ್ಯೇಷ್ಠ ಮಿಥುನ ಮಾಸದಲ್ಲಿ ಶು ॥ 11ನೇ ಆದಿತ್ಯವಾರ ಸ್ವಾತೀ ನಕ್ಷತ್ರದಲ್ಲಿ ವೈನತೇಯಾಂಶರಾಗಿ, ಶ್ರೀ ವಿಷ್ಣುಚಿತ್ತರು (ಪೆರಿಯಾಳ್ವಾರ್) ಅವತರಿಸಿದರು. ಇವರ ತಂದೆಯವರು ಮುಕುಂದಾಚಾರ್ಯರು. ತಾಯಿ ಪದ್ಮಾವತಿ. ಶ್ರೀವಿಲ್ಲಿಪುತ್ತೂರಿನ ದೇವಸ್ಥಾನವು ವಟಪತ್ರಶಾಯಿಯ ದೇವಸ್ಥಾನ. ಆ ದೇವನಲ್ಲಿ ಶ್ರೀ ವಿಷ್ಣುಚಿತ್ತರಿಗೆ ಅನನ್ಯ ಭಕ್ತಿ. ಆ ಪರಮಾತ್ಮನ ಪ್ರೀತ್ಯರ್ಥವಾಗಿ ಸ್ವಾಮಿಯ ಕೈಂಕರ್ಯವನ್ನು ಮಾಡಲು ತುಲಸೀ ತೋಟವನ್ನು ನಿರ್ಮಿಸಿ ಅಲ್ಲಿ ವಿವಿಧ ಸುಂದರ ಪುಷ್ಪಗಳನ್ನು ಬೆಳೆಸಿ ಅವುಗಳಿಂದ ಮಾಲೆಯನ್ನು ಕಟ್ಟಿ ದೇವರಿಗೆ ಸಮರ್ಪಿಸಿ ಕೃತಕೃತ್ಯರಾಗುತ್ತಿದ್ದರು.

ಶ್ರೀವಿಲ್ಲಿಪುತ್ತೂರಿನ ಸೊಬಗು ವರ್ಣಿಸಲು ಸಾಧ್ಯವಿರಲಿಲ್ಲ. ಕಮನೀಯರತ್ನಸಂಕಲಿತ ಕಾಂಚನಸೌಧಮಂದಿರಗಳು. ಕಿವಿಗಿಂಪಾದ ವೇಣು ವೀಣಾ ಮೃದಂಗ ರವವು. ಫಲ ಪುಷ್ಪ ಪಲ್ಲವಗಳಿಂದ ಭರಿತವಾದ ಗಿಡ ಮರಗಳು. ರಮ್ಯ ಪುಷ್ಕರಿಣಿಗಳು, ಅಲ್ಲಿ ಶೋಭಿಸುವ ರಾಜಹಂಸಗಳು. ವಟಪತ್ರಶಾಯಿಯ ದೇವಸ್ಥಾನದ ಮುಂದೆ ಶುಭ್ರವಸ್ತ್ರಧಾರಿ ವಿಷ್ಣುಚಿತ್ತರು ತೋಟಕ್ಕೆ ನೀರೆರೆಯುವ ದೃಶ್ಯ ಅಮೋಘವಾದದು. ಸುಂದರ ಪುಷ್ಪವನಕ್ಕೆ ಕೈಮುಗಿದು ಪುಳಕುವ ಪರಮಾನಂದದಿಂದ ಹೂಗಳನ್ನು ಕೀಳುವ ವಿಷ್ಣುಚಿತ್ತರ ಭಕ್ತಿಯ ಭಾವಭಂಗಿ ಎಲ್ಲರನ್ನೂ ಆಕರ್ಷಿಸು

ತ್ತಿತ್ತು. ಆಗ ದಕ್ಷಿಣ ದೇಶದ ಪಾಂಡ್ಯ ರಾಜ್ಯವನ್ನು ವಲ್ಲಭ ದೇವನೆಂಬ ಅರಸನು ಆಳುತ್ತಿದ್ದನು. ಆತನು ಪರಮ ದೈವ ಭಕ್ತ, ಪ್ರಜಾನುರಾಗಿ, ತನ್ನ ಪ್ರಜೆಗಳ ಕಷ್ಟ ಸುಖಗಳನ್ನು ತಾನೇ ಸ್ವತಃ ವಿಚಾರಿಸಿಕೊಳ್ಳುತ್ತಿದ್ದನು. ಒಂದು ರಾತ್ರಿ ವಲ್ಲಭದೇವನು ನಗರ ಸಂಚಾರಿಯಾಗಿ ಗುಪ್ತ ವೇಷದಿಂದ ಬರುತ್ತಿರಲು ಯಾರೋ ಅಪರಿಚಿತನು ಒಬ್ಬರ ಮನೆಯ ಜಗುಲಿಯ ಮೇಲೆ ನಡುಗುತ್ತಾ ಮಲಗಿರಲು ರಾಜನು ಆತನಲ್ಲಿ ಕನಿಕರಗೊಂಡು "ಸ್ವಾಮಿ ತಾವು ಯಾರು! ಇಲ್ಲಿ ಏಕೆ ಮಲಗಿದ್ದೀರಿ'' ಎಂಬುವುದಾಗಿ ಕೇಳಿದ; ಆ ಅಪರಿಚಿತನು "ನಾನು ಒಬ್ಬ ಯಾತ್ರಿಕ, ಕಾಶಿಯಿಂದ ರಾಮೇಶ್ವರಕ್ಕೆ ಹೋಗುತ್ತಿದ್ದೇನೆ'' ಎಂದ. ಮಾರುವೇಷದಲ್ಲಿದ್ದ ರಾಜನು ಕೈಮುಗಿದು ಆತನ ಲೋಕಾನುಭವವನ್ನು ತನಗೆ ತಿಳಿಸಬೇಕಾಗಿ ಪ್ರಾರ್ಥಿಸಿದ. ಆ ಯಾತ್ರಿಕನು ನಗುತ್ತಾ ತನ್ನ ಗಂಗಾಸ್ನಾನ ಫಲವನ್ನು ವಿಶ್ಲೇಷಿಸುತ್ತಾ ತೀರ್ಥಯಾತ್ರಾ ಉಪಯೋಗಕ್ಕಿಂತ ಮಿಗಿಲಾದ ಒಂದು ಶ್ಲೋಕವನ್ನು ಈ ರೀತಿ ಹೇಳಿದನು:

ವರ್ಷಾರ್ಥಮಷ್ಟೌ ಪ್ರಯತೇತ ಮಾಸಾನ್
ನಿಶಾರ್ಥಮರ್ಧಂ ದಿವಸಂ ಯತೇತ ।
ವಾರ್ಧಕ್ಯ ಹೇತೋರ್ವಯಸಾ ನವೇನ
ಪರತ್ರ ಹೇತೋರಿಹ ಜನ್ಮನಾ ಚ ॥

–ಮಳೆಗಾಲದಲ್ಲಿ ನಾಲ್ಕು ತಿಂಗಳು ಸುಖವಾಗಿರಬೇಕಾದರೆ ಉಳಿದ ಎಂಟು ತಿಂಗಳು ಶ್ರಮ ಪಡಬೇಕು. ರಾತ್ರಿಯಲ್ಲಿ ಸುಖ ನಿದ್ರೆ ಹೊಂದಬೇಕಾದರೆ ಅರ್ಧದಿನ ದುಡಿಯಬೇಕು. ವಾರ್ಧಕ್ಯದಲ್ಲಿ ನಿಶ್ಚಿಂತೆಯಿಂದ ಇರಬೇಕಾದರೆ ಯವ್ವನದಲ್ಲಿ ಸಂಪಾದನೆ ಮಾಡಬೇಕು. ಪರದಲ್ಲಿ ಶ್ರೇಯಸ್ಸನ್ನು ಇಚ್ಛಿಸುವವನು ಇಹದಲ್ಲಿ ಅದಕ್ಕಾಗಿ ಶ್ರಮಪಟ್ಟು ಸಾಧನೆಮಾಡಬೇಕು. ಆ ಯಾತ್ರಿಕನ ಮಾತುಗಳನ್ನು ಕೇಳಿ ರಾಜಾವಲ್ಲಭದೇವನು ಬಹಳ ಸಂತೋಷಗೊಂಡು ಆ ಶ್ಲೋಕದ ಗುಂಗಿನಲ್ಲೇ ಅರಮನೆಗೆ ಹೋಗಿ ತಮ್ಮ ರಾಜ ಪುರೋಹಿತರಾದ ಶೆಲ್ವನಂಬಿಯವರನ್ನು ಕರೆಸಿ ತಮ್ಮ ಶ್ರೇಯಸ್ಸನ್ನು ಉಂಟು ಮಾಡುವ ಪಾರಮಾರ್ಥಿಕ ಸಂಪತ್ತನ್ನು ದಯಪಾಲಿಸಬೇಕೆಂದು ಕೋರಿದರು. ರಾಜಗುರುಗಳಾದ ಶೆಲ್ವನಂಬಿಗಳು – ರಾಜಾ ವಲ್ಲಭದೇವ 'ಧರ್ಮಜ್ಞ ಸಮಯಃ ಪ್ರಮಾಣಂ ವೇದಾಶ್ಚ' ಎಂಬುವಂತೆ ನಿನಗೆ ದೈವಬಲ ಉಂಟಾಗಿರುವುದರಿಂದ ದೈವ ಸ್ವರೂಪವನ್ನು ಅರಿಯಲು ವೇದಾಂತಿಗಳ ಸಭೆಗಳನ್ನು ಮಾಡು, ವೇದ ಬ್ರಾಹ್ಮಣಗಳ ಉಕ್ತಿಗಳನ್ನು ಕೇಳು, ವಿದ್ಯಾ ಪ್ರೌಢಿಮೆಗಳಿಗೆ ಮನ್ನಣೆ ನೀಡು. ಸರ್ವಮತಗಳ ಸಮ್ಮೇಳನವನ್ನು ಏರ್ಪಡಿಸಿ, ಪರತತ್ತ್ವದ ಸ್ವರೂಪವನ್ನು ನೀನು ತಿಳಿ' ಎಂಬುವುದಾಗಿ ಉಪದೇಶಮಾಡಿದರು. ಶೆಲ್ವ ನಂಬಿಗಳ ಮಾತಿನಂತೆ ರಾಜಾ ವಲ್ಲಭದೇವನು ದಕ್ಷಿಣ ಮಧುರೆಯಲ್ಲಿ ಪರತತ್ತ್ವವನ್ನು ತಿಳಿಯಬೇಕೆಂದು ಎಲ್ಲಾ ದೇಶಗಳಿಂದ ವಿದ್ವಾಂಸರನ್ನು ಆಹ್ವಾನಿಸಿ ಒಂದು ಚೀಲದ ತುಂಬ ಚಿನ್ನದ ನಾಣ್ಯಗಳ ಗಂಟನ್ನು ಕಂಬದ ತುದಿಯಲ್ಲಿ ಕಟ್ಟಿ 'ಸೇರಿದ ಸಭೆಯಲ್ಲಿ ಯಾರು ಶ್ರೇಷ್ಠರಾದ ವಿದ್ವಾಂಸರು ಎಂಬುವುದಾಗಿ ನಿರ್ಣಯವಾದವರಿಗೆ ಆ ನಿಧಿಯ ಗಂಟು ಸೇರತಕ್ಕದ್ದು' ಎಂಬುವುದಾಗಿ ಪ್ರಚಾರಮಾಡಿದನು. ಆ ಸಭೆಗೆ ಶೈವರೂ ವೈಷ್ಣವರೂ ಶಾಕ್ತರೂ ಸಾಂಖ್ಯರೂ ಜೈನ ಬೌದ್ಧ– ಎಲ್ಲಾ ಮತದವರು ತಮ್ಮ ತಮ್ಮ ದರ್ಶನವನ್ನು ಪ್ರತಿಪಾದಿಸಲು ಮುಂದಾಗಿ ಬಂದಿದ್ದರು. ಇತ್ತ ಶ್ರೀವಿಲ್ಲಿಪುತ್ತೂರಿನಲ್ಲಿ ನೆಲೆಸಿದ್ದ ವಿಷ್ಣುಚಿತ್ತರಿಗೆ ಆ ರಾತ್ರಿ ಸ್ವಾಮಿಯಾದ ವಟಪತ್ರಶಾಯಿ ಕನಸಿನಲ್ಲಿ ಕಾಣಿಸಿಕೊಂಡು "ನೀವು ಸಭೆಗೆ ಹೋಗಿ ಪರತತ್ತ್ವವನ್ನು ಪ್ರಕಾಶಮಾಡಿ ಎಲ್ಲರ ಮೆಚ್ಚಿಗೆಯನ್ನು ಪಡೆದು ಬನ್ನಿ'' ಎಂಬುವುದಾಗಿ ಹೇಳಲು ಸ್ವಾಮಿಯ ಆಜ್ಞೆಯನ್ನು ಹೊತ್ತ ವಿಷ್ಣುಚಿತ್ತರು ದಕ್ಷಿಣ ಮಧುರೆಗೆ ಬಂದರು. ಎಲ್ಲರೂ ತಮ್ಮ ತಮ್ಮ ಮತಗಳ ದರ್ಶನವನ್ನೂ ವೇದ ಶಾಸ್ತ್ರ ಪುರಾಣ ಇತಿಹಾಸಗಳಿಂದ ಪ್ರತಿಪಾದಿಸಿದರು. ವಿಷ್ಣುಚಿತ್ತರು ತಮ್ಮ ಅಮೋಘವಾದ ಪಾಂಡಿತ್ಯದಿಂದ ಪರಮಾತ್ಮನ ಪ್ರೇಮದ ಕಡಲಿನಲ್ಲಿ ಮುಳುಗಿ ಶ್ರೀಮನ್ನಾರಾಯಣನೇ ಪರತತ್ತ್ವವೆಂದು ಹೇಳಲು ಉಪಕ್ರಮಿಸಿದರು.

"ಧರ್ಮಿಷ್ಠನಾದ ರಾಜನೇ ಹಾಗೂ ವಿದ್ವಾಂಸರೇ, ಪರಮಾತ್ಮನನ್ನು ವೇದಗಳು ಶ್ರೀಮನ್ನಾರಾಯಣನೆಂದು ಉದ್ಘೋಷಿಸುತ್ತವೆ. ಆ ಶ್ರೀಮನ್ನಾರಾಯಣನು ಸಕಲಚೇತನಾಚೇತನ ವಸ್ತುಗಳಿಗೆ ಧಾರಕನು. ಪೋಷಕನು. ಅಂತರ್ಯಾಮಿ, ಇತನೇ ಸಕಲ ಚರಾಚರವಸ್ತುಗಳಿಗೆ ಕಾರಣನು. ಸೃಷ್ಟಿ ಸ್ಥಿತಿಲಯಗಳಿಗೆ ಅವನೇ ಕಾರಣನು, ತ್ರಿಗುಣಾತೀತನು. ವೇದಗಳು ಉಪನಿ

**ಶ್ರೀ ಕಂದಾಡೈ ಕೇಶವನ್**

ಸತ್ತುಗಳು ಋಷಿಗಳೂ ಆಳ್ವಾರರೂ ಪೂರ್ವಾಚಾರ್ಯರು ಅವನನ್ನು ಕುರಿತು "ಅಂತರ್ಬಹಿಶ್ಚ ತತ್ ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" "ಏಕೋ ಹ ವೈ ನಾರಾಯಣ ಆಸೀತ್" "ಏಷ ಸ್ಸರ್ವ ಭೂತಾಂತರಾತ್ಮಾ ಅಪಹತ ಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ" "ನ ಬ್ರಹ್ಮಾನೇಶಾನಃ, ನೇಮೇ ದ್ಯಾವಾ ಪೃಥಿವಿ"– ಎಂಬುವುದಾಗಿ ಹೇಳುವಾಗ ಬ್ರಹ್ಮನೂ ಇರಲಿಲ್ಲ, ಈಶಾನನೂ ಇರಲಿಲ್ಲ, ಆದ್ದರಿಂದ ಪರಬ್ರಹ್ಮನು ನಾರಾಯಣನೇ. ನಾರಾಯಣೀಯವು ಆ ಪರತತ್ತ್ವವನ್ನು ಕೊಂಡಾಡುವಾಗ "ನಾರಾಯಣಃ ಪರಬ್ರಹ್ಮ ತತ್ತ್ವಂ ನಾರಾಯಣಃ ಪರಂ" ಎಂಬುದಾಗಿ ಘೋಷಿಸಿದೆ, 'ನಾರಾಯಣನೇ ನಮಕ್ಕೇ ಪರೈತರುವಾನ್' ನಾರಾಯಣನೇ ಉಪಾಯ. ಅವನನ್ನು ಭಕ್ತಿ ಮಾರ್ಗದಿಂದ ಹೊಂದುವುವೇ ಉಪೇಯ. ಇದೇ ಪರಮ ಪುರುಷಾರ್ಥ – ಎಂಬುವುದಾಗಿ "ಶ್ರೀಮನ್ನಾರಾಯಣನೇ ಪರತತ್ತ್ವವೆಂದು ಪ್ರತಿಪಾದಿಸಲು ತುಂಬಿದ ಸಭೆ ಮಂತ್ರಮುಗ್ಧವಾಯಿತು. ವಲ್ಲಭದೇವನು ವಿಷ್ಣುಚಿತ್ತರಿಗೆ "ಪಟ್ಟರ್‌ಪಿರಾನ್ ಭಟ್ಟನಾಥ – ಪಂಡಿತ ಶ್ರೇಷ್ಠ" ಎಂಬುವ ಬಿರುದನ್ನು ನೀಡಿ ನಿಧಿಯನ್ನು ಅವರಿಗೆ ಅರ್ಪಿಸಿ ಸಪರಿವಾರವಾಗಿ ಆನೆಯ ಮೇಲೆ ಕೂರಿಸಿ ಮೆರವಣಿಗೆ ಮಾಡಿದನು. ವಿಷ್ಣುಚಿತ್ತರ ಈ ಮೆರವಣಿಗೆಯ ವೈಭವವನ್ನು ಕಾಣಲು ಶ್ರೀಮನ್ನಾರಾಯಣನು ಲಕ್ಷ್ಮೀ ಸಮೇತನಾಗಿ ಗರುಡಾರೂಢನಾಗಿ ಎಲ್ಲರಿಗೂ ಕಾಣಿಸಿಕೊಳ್ಳಲು ಆ ಪರಮಾತ್ಮನನ್ನು ಕಂಡ ಪೆರಿಯಾಳ್ವಾರರು ಆನಂದ ಭರಿತರಾಗಿ ಪರಮಾನಂದದಿಂದ ಭಕ್ತಿ ಪಾರವಶ್ಯದಿಂದ ಸೌಂದರ್ಯ ಸೌಕುಮಾರ್ಯ ಲಾವಣ್ಯ ಗುಣಗಳಿಂದ ಕೂಡಿದ ಅಪ್ರಾಕೃತವಾಗಿ ಬೆಳಗುತ್ತಿರುವ ಆ ದಿವ್ಯಮಂಗಳ ವಿಗ್ರಹವನ್ನು ಕಂಡು ಅವನ ಸೌಂದರ್ಯಕ್ಕೆ ಯಾವ ಚ್ಯುತಿ ಬರುವುದೋ ಎಂಬುದಾಗಿ ಭಯಪಟ್ಟು ತನ್ನ ದೇವರಿಗೆ ಕ್ಷೇಮವನ್ನು ಕೋರುತ್ತಾ ಮಂಗಳಾ ಶಾಸನವನ್ನು 'ತಿರುಪ್ಪಲ್ಲಾಂಡು' ಎಂಬುವ 12 ಪದ್ಯಗಳಿಂದ ಹಾಡಿದ್ದಾರೆ. ಪರಮಾತ್ಮನು ಸರ್ವ ಶಕ್ತನು ಸರ್ವರಕ್ಷಕನು ಎಂಬುವುದಾಗಿ ತಿಳಿದಿದ್ದರೂ ಭಗವಂತನ ಏಳಿಗೆಯೇ ತಮ್ಮ ಏಳಿಗೆ ಎಂಬುವುದಾಗಿ ಭಾವಿಸಿ ಭಕ್ತರು ಪ್ರೇಮಾತಿಶಯದಲ್ಲಿ ದೇವರಿಗೆ ಮಂಗಳಾಶಾಸನ ಮಾಡುವುದು ಯುಕ್ತವಾಗಿಯೇ ಇದೆ. ಇಂತಹ ಸಂದರ್ಭಗಳಲ್ಲಿ ನಾವು ರಾಮಾಯಣದಲ್ಲಿ ಶ್ರೀರಾಮಲಕ್ಷ್ಮಣರು ಅರಣ್ಯಕ್ಕೆ ಹೋದಾಗ ಪ್ರಜೆಗಳು ಮಂಗಳಾಶಾಸನ ಮಾಡಿದ್ದನ್ನೂ ಅರಣ್ಯದಲ್ಲಿ ಮಹರ್ಷಿಗಳೂ ಕೂಡ ರಾಮನಿಗೆ ಮಂಗಳಾಶಾಸನವನ್ನು ಮಾಡಿರುವುದನ್ನು ನಾವು ಜ್ಞಾಪಿಸಿಕೊಳ್ಳಬಹುದು. ಸ್ವಸ್ತಿವಾಚಕವಾದ ಈ ತಿರುಪ್ಪಲ್ಲಾಂಡುವನ್ನು ಪ್ರತಿದಿನ ಶ್ರೀವೈಷ್ಣವರು ತಮ್ಮ ದೇವತಾರಾಧನೆಯ ಸಂಬಂಧರಲ್ಲಿ ಪಠಿಸುತ್ತಾರೆ.

ಪೆರಿಯಾಳ್ವಾರರು ತಿರುಪ್ಪಲ್ಲಾಂಡುವಿನ ಈ ಎರಡು ಪಾಶುರಗಳು ಹಾಡಲು ಬಲು ಚೆಂದ.

ಪಲ್ಲಾಂಡು ಪಲ್ಲಾಂಡು ಪಲ್ಲಾಯಿರತ್ತಾಂಡು
ಪಲಕೋಟಿ ನೂರಾಯಿರಮುಂ
ಪಲ್ಲಾಂಡ ತಿಂಡೋಳ್ ಮಣಿವಣ್ಣಾ
ಉನ್ ಶೇವಡಿ ಶೆವ್ವಿ ತಿರುಕ್ಕಾಪ್ಪು

ಮಂಗಳಂ ಮಂಗಳಂ ಸ್ವಾಮಿ ನಿನಗೆ
ಅನುಗಾಲವು
ಮಂಗಳವು ಸಾವಿರಕಾಲ ಹಲ ಕೋಟಿ
ನೂರ್‌ಕಾಲ
ಮಲ್ಲರನುಗೆದ್ದ ನಿಡುದೋಳ ಮಣಿವಣ್ಣಾ
ಕೆಂದಾವರೆಯಡಿಗೆ ಶೆವ್ವಿ ತಿರುಕ್ಕಾಪು,
(ರಕ್ಷೆ ಇರಲಿ)

ಅಡಿಯೋ ಮೋಡುಂ ನಿನ್ನೋಡುಂ
ಪಿರಿವಿನ್ರಿ ಆಯಿರಂ ಪಲ್ಲಾಂಡು
ವಡಿವಾಯ್ ನಿನ್ರು ವಲಮಾರ್ಪಿನಿಲ್
ವಾಳಹಿನ್ರ ಮಂಗೈಯುಂಪಲ್ಲಾಂಡು

ಶೇಷ ಭೂತರಾದ ನಮಗೂ ನಿನಗೂ ವಿಯೋಗವಿಲ್ಲದಂತೆ ಸಾವಿರ ವರುಷ ಮಂಗಳವು. ನಿನ್ನ ವಕ್ಷಸ್ಥಳದಲ್ಲಿ ನಿತ್ಯವಾಸ ಮಾಡುವ ಲಕ್ಷ್ಮಿಗೆ ಮಂಗಳವು. ಸುಂದರ ತೇಜೋರಾಶಿಯಾಗಿ ಬೆಳಗುವ ನಿನ್ನ ದಕ್ಷಿಣ ಹಸ್ತದಲ್ಲಿರುವ ಚಕ್ರಾಯುಧಕ್ಕೆ ಮಂಗಳವು. ಯುದ್ಧದಲ್ಲಿ ಶತ್ರುಗಳ ಹೃದಯವನ್ನು ಭೇದಿಸುವ ಪಾಂಚಜನ್ಯವೆಂಬ ಶಂಖವು ಎಂದೆಂದಿಗೂ ಬಾಳಲಿ. ಈ ದಿವ್ಯ ಪ್ರಬಂಧವನ್ನು ಪಠಿಸುವವರು ಉತ್ಕೃಷ್ಟ ಪದವಿಯನ್ನು ಪಡೆಯುತ್ತಾರೆ ಎಂಬುದೂ ಫಲ ಶ್ರುತಿ.

ತರುವಾಯ ಶ್ರೀವಿಷ್ಣುಚಿತ್ತರು ರಾಜನಿಂದ ಬಹು ವಿಧವಾಗಿ ಸನ್ಮಾನಿತರಾಗಿ ಶ್ರೀವಿಲ್ಲಿಪುತ್ತೂರಿಗೆ ಹಿಂತಿರುಗಿ ತಾವು ಗೆದ್ದು ತಂದ ನಿಧಿಯನ್ನು ಶ್ರೀವಟಪತ್ರಶಾಯಿಗೆ ಸಮರ್ಪಿಸಿ ಯಥಾಪ್ರಕಾರ ಸ್ವಾಮಿಯ ಪುಷ್ಪ ಕೈಂಕರ್ಯದಲ್ಲಿ ನಿರತರಾದರು. ದ್ರಾವಿಡ ವೇದಗಳಿಗೆ ಪ್ರಣವ ಸ್ವರೂಪವಾದ ತಿರುಪ್ಪಲ್ಲಾಂಡು ಹಾಡಿದ ಮೇಲೆ ಪೆರಿಯಾಳ್ವಾರರಿಗೆ ತನ್ನ ನಿತ್ಯ ಆರಾಧ್ಯದೇವರಾದ ಶ್ರೀಕೃಷ್ಣನ ಮೇಲೆ ಅತಿಶಯವಾದ ಭಕ್ತಿವುಂಟಾಯಿತು. ಕೃಷ್ಣನನ್ನು ಕಂಡರೆ ತುಂಬ ವಾತ್ಸಲ್ಯ. ಭಗವಂತ ತನಗೆ ಮಗು ತಾನು ಭಗವಂತನ ತಾಯಿ ಎಂಬುವ ಭಕ್ತಿಭಾವ ಉಕ್ಕಿ ಸದಾ ಭಗವಂತನಾದ ವಟಪತ್ರಶಾಯಿ ಮಗು, ತಾನು ಯಶೋದೆ ಎಂದು ನೆನೆಸಿ ಅತನ ಲಾಲನೆ ಪಾಲನೆಗಳಲ್ಲಿ ಮಗ್ನರಾದರು. ಪರಮಾತ್ಮನ ಸೌಶೀಲ್ಯ, ಸೌಲಭ್ಯ, ಸಾಮೀಪ್ಯ, ಸೌಕುಮಾರ್ಯಾದಿಗಳನ್ನು ಕುರಿತು ಹಾಡುತ್ತಾ ಬಾಲಕೃಷ್ಣನ ವೃತ್ತಾಂತಗಳನ್ನು ಪ್ರತಿಪಾದಿಸುವ ಪೆರಿಯಾಳ್ವಾರ್ ತಿರುಮೊಳಿ ಎಂಬುವ 461 ಸುಂದರ ಪಾಶುರಗಳನ್ನು ಹಾಡಿದರು. ಕೃಷ್ಣನಿಗೆ ತಾನು ಸ್ನಾನ ಮಾಡಿಸುವ ಬಗ್ಗೆ ಹಾಡುತ್ತಾ

ವೆಣ್ಣೆಯಳೈಂದ ಕುಣುಂಗುಂ ವಿಳೈಯಾಡು
ಪುಳುದಿಯುಂಕೊಂಡು
ತಿಣ್ಣೆನ ವಿಪ್ಪಿರಾವುನ್ನೈ ತ್ತೇಯ್‌ತ್ತು
ಕಿಡಕ್ಕ ನಾನೊಟ್ಟೇನ್
ಎಣ್ಣೆಯ್ ಪ್ಪುಳಿಪ್ಪಳಂಕೊಂಡಿಗೆತ್ತ
ನೈಪೋದು ಮಿರುಂದೇನ್
ನಣ್ಣಲರಿಯ ಪಿರಾನೇ ನಾರಣಾ
ನೀರಾಡವಾರಾಯ್

ಬೆಣ್ಣೆಯನ್ನು ಮೆದ್ದು ಆದರ ಕಂಪು ಮೈಗೆ ಸೋಂಕಿ ಆಟವಾಡಿ ಮೈಯೆಲ್ಲಾ ದೂಳಾಗಿ ಕಪ್ಪಗಿರಲು ನಿನ್ನನ್ನು ಮಲಗಲು ಬಿಡುವುದಿಲ್ಲ. ನಾನು ಎಣ್ಣೆ ಹುಣಿಸೆ ಹಣ್ಣು ತಂದು ಕಾಯುತ್ತಿದ್ದೇನೆ, ನಾರಾಯಣಾ ಸ್ನಾನಮಾಡಲು ಬಾರಯ್ಯಾ – ಎಂಬುವುದಾಗಿ ಕೂಗುತ್ತಾರೆ. ಕಜ್ಜಾಯವನ್ನು ಬೆಲ್ಲವನ್ನು ಹಾಲಿನಲ್ಲಿ ಬೆರೆಸಿ ನಿಂತಿರುವೆ. ಬೇಗನೆ ಸ್ನಾನಮಾಡಲು ಬಾರಯ್ಯ – ಎಂದು ಕೂಗುತ್ತಾರೆ. ಸ್ನಾನಮಾಡಿದ ಮೇಲೆ ಕೃಷ್ಣನಿಗೆ ಹೂ ಮುಡಿಸುವ ಈ ಸುಂದರ ಪ್ರಬಂಧ ಬಲು ಸೊಗಸಾಗಿದೆ.

ಆನಿರೈ ಮೇಯ್‌ಕ್ಕ ನೀಪೋದಿ
ಯರುಮರುನ್ದಾವದರಿಯಾಯ್
ಕಾನಹಮೆಲ್ಲಾಂ ತಿರಿಂದು ಉನ್ ಕರಿಯ
ತಿರುಮೇನಿವಾಡ
ಪಾನೈಯಿಲ್ ಪಾಲೈಪ್ಪರುಹಿ
ಪ್ಪತ್ರಾದಾರೆಲ್ಲಾಂ ಶಿರಿಪ್ಪ
ತೇನಿಲಿನಿಯ ಪಿರಾನೇ ಶೆಣ್ಬಹಪ್ಪೂಚ್ಚೂಟ್ಟ
ವಾರಾಯ್

ಗೋವುಗಳನ್ನು ಮೇಯಿಸಲು ಹೋಗಲಿಯೇನು. ಕಾಡು ಮೇಡುಗಳಲ್ಲಿ ಕರುಗಳನ್ನು ಮೇಯಿಸಲು ನಿನ್ನ ಕರಿಯ ಸಿರಿಯ ಮೈ ಬಾಡಲು ನಾನು ಬೇರೆ ಔಷಧವನ್ನರಿಯೆ. ಜೇನಿಗಿಂತ ಸಿಹಿಯಾದ ಕಣ್ಣನೇ, ಸಂಪಿಗೆ ಹೂವನ್ನು ಮುಡಿಯಲು ಬಾರಯ್ಯಾ – ಎಂಬುವುದಾಗಿ ಕರೆಯುತ್ತಾರೆ

ಸಂಜೆಯು ಹೊತ್ತಾಗಲು ಮನೆಗೆ ಬಾರದ ಕೃಷ್ಣನನ್ನು ಕುರಿತು ಯಶೋದೆಯ ಸ್ಥಾನದಲ್ಲಿ ತಾವು ನಿಂತು ಚೆಲುವ ಕೃಷ್ಣನಿಗೆ ರಕ್ಷೆಯಿಡಲು ಪರಿಪರಿಯಾಗಿ ಕೂಗುತ್ತಾರೆ.

(29ನೇ ಪುಟ ನೋಡಿ)

# ತೆಲುಗು ನಾಟಕ

೧೮೭೩ಕ್ಕಿಂತ ಮುಂಚೆ ತೆಲುಗು ಸಾಹಿತ್ಯದಲ್ಲಿ ಯಾವ ತೆರನಾದ ನಾಟಕಗಳೂ ಇರಲಿಲ್ಲ. ಸಂಸ್ಕೃತನಾಟಕಗಳೂ ಕಾವ್ಯವಾಗಿ ಪರಿವರ್ತನವಾಗುತ್ತಿದ್ದವು. ಪಿಲ್ಲಲಮರ್ರಿ ವೀರಭದ್ರ ಎಂಬಾತ ಹದಿನೈದನೆಯ ಶತಮಾನದಲ್ಲಿ ಕಾಳಿದಾಸನ 'ಶಾಕುಂತಲಾ' ನಾಟಕವನ್ನು ದೀರ್ಘಕವನವಾಗಿ ರಚಿಸಿದನು. ಕೃಷ್ಣಮಿಶ್ರನಿಂದ ರಚಿತವಾದ "ಪ್ರಬೋಧ ಚಂದ್ರೋದಯವು", ನಂದಿ ಮಲ್ಲಣ್ಣ, ಮತ್ತು ಘಂಟಾಸಿಂಗಣ್ಣ ಎಂಬುವವರು ೧೫ ನೆಯ ಶತಮಾನದಲ್ಲಿ ಕಾವ್ಯವನ್ನಾಗಿ ಮಾರ್ಪಡಿಸಿದರು. ಆದರೂ ಆಂಧ್ರದೇಶದಲ್ಲಿ ನಾಟಕ ಕಲೆಯು ಜೀವಂತವಾಗಿ ಬೆಳೆಯುತ್ತಲೇ ಇತ್ತು. ಭಾಗವತರ ಕೂಟಗಳೆಲ್ಲಾ ನಾಟಕ ಸಂಘಗಳೇ ಆಗಿದ್ದುವು. ಅವರ ಆಟಗಳೆಲ್ಲಾ ಸಂಸ್ಕೃತದ ನಾಟಕಗಳನ್ನು ಆಶ್ರಯಿಸಿ ದೇಶೀಯವಾದ ಮಾರ್ಗದಲ್ಲಿ ಬೆಳೆದುಬಂದಿವೆ. ಹಾಗೆಯೇ "ಯಕ್ಷಗಾನಗಳು" ಎಂಬ ಗ್ರಾಮೀಣ ರೂಪಕಗಳು ಮಧುರೆ ಮತ್ತು ತಂಜಾವೂರು ನಾಯಕರ ಆಶ್ರಯದಲ್ಲಿ ಹೇರಳವಾಗಿ ಬೆಳೆದವು. ಇವುಗಳು ಆಂಧ್ರರ ನಾಟಕದ ದಾಹವನ್ನು ಬಹುಮಟ್ಟಿಗೆ ತೃಪ್ತಿಗೊಳಿಸುತ್ತಿದ್ದವು.

"ಭಾಗವತ"ಗಳ ಪಾತ್ರಗಳನ್ನು ಮಲಬಾರಿನ ಕಥಕ್ಕಳಿಯ ಹಾಗೆ ಅಭಿನಯ ಮಾಡುತ್ತಾರೆ. ಸಂಸ್ಕೃತದಲ್ಲಿ ಬಹುಶಃ ಕಾಳಿದಾಸನಿಗಿಂತ ಹಿಂದೆಯೇ ನಾಟ್ಯಗಳು ನಾಟಕಗಳಿಂದ ದೂರವಾಗಿರಬೇಕು. ಆದರೆ ಇತರ ದಾಕ್ಷಿಣಾತ್ಯ ರೂಪಕಗಳಂತೆ ಆಂಧ್ರದಲ್ಲಿ ನಾಟ್ಯಕ್ಕೆ ಪ್ರಾಧಾನ್ಯ. ಭಾಗವತದ ಸಂಪ್ರದಾಯವು ಈಗಲೂ ಕೂಚಿಪೂಡಿ ಭಾಗವತರುಗಳಿಂದ ಪೋಷಿಸಲ್ಪಡುತ್ತಿದೆ. ಭಾಗವತರ ನಾಟಕಗಳು ಕವನ, ಗೀತ, ಅಭಿನಯ ಮತ್ತು ನಾಟ್ಯಗಳ ಅದ್ಭುತ ಸಮನ್ವಯ. ಈ ನಾಟ್ಯಕ್ಕೆ ಭರತನಾಟ್ಯವೆಂದು ಹೆಸರು. ಇವು ಇಂದಿಗೂ ಆಂಧ್ರದೇಶದಲ್ಲಿ ಬಹು ಜನಪ್ರಿಯವಾಗಿವೆ. ಇವುಗಳ ಪುನರುದ್ಧಾರಕ್ಕೆ ಬೇಕಾಗಿರುವುದು ಅವುಗಳ ಸಂಗೀತದಲ್ಲಿ ಸ್ವಲ್ಪ ಪರಿಷ್ಕರಣ. ಇದು ಕೂಡದೆಂದೂ ಮೂಲದಲ್ಲಿ ಇರುವ ಹಾಗೆಯೇ ಇರಬೇಕೆಂದೂ ಕೆಲವು ಸಂಪ್ರದಾಯಸ್ಥರ ವಾದ. ಇದು ಅಷ್ಟೇನೂ ಸೂಕ್ತವಲ್ಲವೆಂದು ಕಾಣುತ್ತದೆ. ಪರಿಷ್ಕರಣ ಮಾಡಿದರೆ ಉತ್ತಮ ರೂಪಕಗಳಾಗುವುದರಲ್ಲಿ ಸಂದೇಹವಿಲ್ಲ.

ಇವುಗಳಿಗಿಂತ ಆಂಧ್ರದೇಶದಲ್ಲಿ ಇನ್ನೂ ಹಿಂದಿನಿಂದ ಜನಪ್ರಿಯವಾಗಿರುವುವು ಯಕ್ಷಗಾನಗಳು. ಇವು ಮಧುರೆ ಮತ್ತು ತಂಜಾವೂರು ನಾಯಕರುಗಳ ಪ್ರೋತ್ಸಾಹದಿಂದ ವಿಶೇಷ ಅಭಿವೃದ್ಧಿಯಾದವು. ನಾಯಕರು ಶೃಂಗಾರ ಪ್ರಿಯರು. ಶಾರೀರಿಕ ಸುಖವೇ ಅವರ ಪರಮಧ್ಯೇಯವಾಗಿತ್ತು. ಅವರು ತಮ್ಮ ನೇತ್ರತೃಪ್ತಿಗಾಗಿ ಅನೇಕ ಯಕ್ಷಗಾನಗಳಿಗೆ ಪ್ರೇರಕರಾದರು. ಅನೇಕ ಯಕ್ಷಗಾನ, ಕೊರವಂಜಿ, ಜಕ್ಕನಗಳು ನಾಯಕರ ಆಸ್ಥಾನಪಂಡಿತರಿಂದ ರಚಿತವಾದುವು. ಇವು ದೃಶ್ಯ ವಿವರ, ಸಂಭಾಷಣೆ ಮೊದಲಾದವುಗಳಿಂದ ಕೂಡಿ ನಾಟಕದಂತೆಯೇ ಮನರಂಜಕವಾಗಿವೆ. ಸುವರ್ಣಕಾರನಾದ ಕಂದುಕೂರಿ ರುದ್ರಯ್ಯನಿಂದ ರಚಿತವಾದ "ಸುಗ್ರೀವ ವಿಜಯ"ವೇ ಮೊದಲನೆಯ ಯಕ್ಷಗಾನ. ಅದನ್ನು ಅನುಸರಿಸಿ ಮುಂದೆ ಇಂತಹ ಅನೇಕ ಕೃತಿಗಳು ರಚಿತವಾದುವು. ಇವು ಶ್ರೀಸಾಮಾನ್ಯರಿಗಾಗಿಯೇ ರಚಿತವಾಗಿರುವುದರಿಂದ ಬಹಳ ಸರಳವಾಗಿವೆ. ರಘುನಾಥನಾಯಕನೊಬ್ಬನೇ ಇನ್ನೂರಕ್ಕಿಂತ ಹೆಚ್ಚಿನ ಸಂಖ್ಯೆಯ ಯಕ್ಷಗಾನಗಳನ್ನು ರಚಿಸಿರುವಂತೆ ಪ್ರತೀತಿ. ಈ ಯಕ್ಷಗಾನಗಳ ವಸ್ತು ಕಾಮಶೃಂಗಾರ. ದಾಂಪತ್ಯಾತೀತಪ್ರೇಮವೇ ಸಾಮಾನ್ಯವಸ್ತು- "ರಾಧಾಮಾಧವ", "ತಾರಾಶಶಾಂಕ", "ಇಂದ್ರ ಅಹಲ್ಯಾ", "ಅಹಲ್ಯಾ ಸಂಕ್ರಂದನ" ಇವು ಕೆಲವು ಉದಾಹರಣೆಗಳು. ಸ್ವರಮೇಳವೂ ಸರಳತೆಯೂ ಅವುಗಳ ವೈಶಿಷ್ಟ್ಯ.

ಚೇಮಕೂರಿ ವೆಂಕಟಕವಿ, ವೆಂಕಟಕೃಷ್ಣನಾಯಕ, ವಿಜಯರಂಗ, ಚೊಕ್ಕನಾಥ, ಅನಂತಭೂಪಾಲ, ಇವರು ಈ ಮಾರ್ಗದಲ್ಲಿ ಪ್ರಸಿದ್ಧರು. ಜಾತಿ ಮತ ಲಿಂಗಭೇದಗಳಿಲ್ಲದೆ ಎಲ್ಲರನ್ನೂ ಕಾವ್ಯರಚನೆಗೆ ಆಕರ್ಷಿಸಿದುದು ಯಕ್ಷಗಾನಗಳ ವೈಶಿಷ್ಟ್ಯ. ರಘುನಾಥನಾಯಕನೇ ಅಲ್ಲದೆ ಅವನ ಸಂಸಾರದವರೆಲ್ಲಾ ಅನೇಕ ಯಕ್ಷಗಾನಗಳನ್ನು ರಚಿಸಿದ್ದಾರೆ. ಅವನ ಹೆಂಡತಿಯಾದ ರಾಮಭದ್ರಾಂಬೆಯು "ರಘುನಾಥವಿಲಾಸ"ವೆಂಬ ಗೀತರೂಪಕವೊಂದನ್ನೂ, ಅವನ ಮಗನಾದ ವಿಜಯ ರಾಘವನಾಯಕನು "ರಘುನಾಥಾ–ಭ್ಯುದಯ" ಎಂಬ ನಾಟಕವನ್ನೂ, "ರುಕ್ಮಿಣೀಕೃಷ್ಣ ಯಕ್ಷಗಾನ"ವೇ ಮೊದಲಾದ ಅನೇಕ ಯಕ್ಷಗಾನಗಳನ್ನೂ ರಚಿಸಿದ್ದಾರೆ. ವಿಜಯ ರಾಘವನಾಯಕನಿಂದ ಕನಕಾಭಿಷಿಕ್ತಳಾದ ಕವಯಿತ್ರಿ ಪಸುಪಲತಿ ರಂಗರಾಜಮ್ಮ ಎಂಬುವಳು "ಮನ್ನಾರುದಾನ ವಿಲಾಸಮ್" ಮತ್ತು "ಉಷಾಪರಿಣಯಮ್" ಎಂಬ ಎರಡು ಯಕ್ಷಗಾನಗಳನ್ನು ರಚಿಸಿದ್ದಾಳೆ. ಇಂತಹ ಯಕ್ಷಗಾನ ಕೃತಿಗಳು ಮುಂದಿನ ಅನೇಕರಿಂದ ಇಂದಿನವರೆಗೆ ರಚಿತವಾಗುತ್ತಲೇ ಇವೆ. ಇವು ಆಂಧ್ರರಿಗೆ ನಾಟಕಗಳಿಂದ ಆಗಬೇಕಾದ ಮನರಂಜನೆಯನ್ನು ಸಾಕಷ್ಟು ಮಾಡುತ್ತಿದ್ದವು.

ಆದರೂ ಸಂಸ್ಕೃತ ನಾಟಕಗಳ ಮಾದರಿಯ ನಾಟಕಗಳು ಆಧುನಿಕ ಕಾಲದವರೆಗೆ ತೆಲುಗರಲ್ಲಿ ಬಳಕೆಯಲ್ಲಿರಲಿಲ್ಲ. ಇಂಗ್ಲೀಷ್ ವಿದ್ಯಾಭ್ಯಾಸವು ರೂಢಿಗೆ ಬಂದ ಮೇಲೆ ಆಂಧ್ರರು ತಮ್ಮಲ್ಲಿಯೂ ಅಂತಹ ನಾಟಕಗಳ ಆವಶ್ಯಕತೆಯನ್ನು ಮನಗಂಡರು.

**ಡಾ॥ ಎನ್. ಅನಂತರಂಗಾಚಾರ್**

೧೮೭೬ ರಲ್ಲಿ ವಾವಿಳ್ಳ ವಾಸುದೇವಶಾಸ್ತ್ರಿ "ಜೂಲಿಯಸ್ ಸೀಸರ್"ನ್ನು ತೆಲುಗಿಗೆ ಭಾಷಾಂತರಿಸಿದರು. ೧೮೮೦ ರಲ್ಲಿ ಗುರುಜಾಡ ರಾಮಮೂರ್ತಿ "ಮರ್ಚೆಂಟ್ ಆಫ್ ವೆನಿಸ್" ನಾಟಕದ ಮೊದಲೆರಡು ಅಂಕಗಳನ್ನು ಪರಿವರ್ತಿಸಿದ. ಈತ ಕೆಲವು ಗದ್ಯ ರಚನೆಗಳನ್ನು ನಾಟಕ ರೂಪದಲ್ಲಿ ತಂದಿದ್ದಾನೆ. 'ವೀರೇಶಲಿಂಗಂ' ಅವರು ಈ ನಾಟಕವನ್ನು ಸಂಪೂರ್ಣವಾಗಿ ಪದ್ಯದಲ್ಲಿ ಭಾಷಾಂತರಿಸಿದ್ದಾರೆ. ಮುಂದೆ ಷೇಕ್ಸ್‌ಪಿಯರನ ಹನ್ನೆರಡಕ್ಕೂ ಮೀರಿದ ನಾಟಕಗಳನ್ನು ಭಾಷಾಂತರಿಸಿಯೋ ಅನುವಾದಿಸಿಯೋ ತೆಲುಗಿಗೆ ತಂದುಕೊಳ್ಳಲಾಗಿದೆ. ಈ ಮಧ್ಯೆ ಧಾರವಾಡದ ಪಾರ್ಸಿ ನಾಟಕ ಮಂಡಲಿಯವರು ನಾಡಿನಲ್ಲೆಲ್ಲಾ ಸಂಚರಿಸಿ ಹಿಂದೀ ನಾಟಕಗಳನ್ನು ಅಭಿನಯಿಸಿದರು. ಇದನ್ನು ನೋಡಿ ವಿಜಯನಗರದ ಮಹಾರಾಜರಾದ ಆನಂದಗಜಪತಿಯವರು ಸಂಸ್ಕೃತನಾಟಕ ಸಂಘವನ್ನು ಸ್ಥಾಪಿಸಿ ಸಂಸ್ಕೃತನಾಟಕಗಳನ್ನು ಆಡಿಸಿದರು. ಅವರ ಅವಸಾನದೊಂದಿಗೇ ಸಂಘಕ್ಕೂ ಅವಸಾನ ಪ್ರಾಪ್ತವಾಯಿತು. ಈ ಕಾಲಕ್ಕಾಗಲೇ ಸಂಸ್ಕೃತ ನಾಟಕಗಳು ತೆಲುಗಿಗೆ ಭಾಷಾಂತರವಾಗಲು ಪ್ರಾರಂಭವಾಗಿತ್ತು. ಕೊಕ್ಕೊಂಡ ವೆಂಕಟರತ್ನಂರವರ "ನರಕಾಸುರ ವಿಜಯ ವ್ಯಾಯೋಗ"ವು ಅವುಗಳಲ್ಲಿ ಮೊದಲನೆಯದು. ಅನಂತರ ವೀರೇಶಲಿಂಗಂ ಅವರ "ಅಭಿಜ್ಞಾನ ಶಾಕುಂತಲಾ" ಮತ್ತು ಹರ್ಷನ "ರತ್ನಾವಳಿ" ತಲೆ ಹಾಕಿದುವು. ಇವರಿಂದಲೇ "ಮರ್ಚೆಂಟ್ ಆಫ್ ವೆನ್ನಿಸ್" "ಕಾಮಿಡಿ ಆಫ್ ಎರರ್ಸ್" ಎಂಬ ಎರಡು ಇಂಗ್ಲೀಷ್ ನಾಟಕಗಳೂ ಪರಿವರ್ತಿತವಾದವು. ಮುಂದೆ ಬಳ್ಳಾರಿಯಲ್ಲಿ "ಸರಸವಿನೋದಿನೀ ಸಭೆ"ಯೂ ಮದರಾಸಿನಲ್ಲಿ "ಸುಗುಣ ವಿಲಾಸಿನೀ ಸಭೆ"ಯೂ ಪ್ರಾರಂಭವಾದುವು. ಸುಗುಣ ವಿಲಾಸಿನೀ ಸಭೆಯಲ್ಲಿ ಎಲ್ಲಭಾಷೆಯ ನಾಟಕಗಳೂ ಅಭಿನಯಿಸಲ್ಪಡುತ್ತಿದ್ದವು. ಮೊದಲನೆಯ ಸಭೆಗೆ ಮೂಲಶಕ್ತಿ, ಧರ್ಮಾವರಂ ಕೃಷ್ಣಮಾಚಾರಿಯವರು. ಇವರು ಶ್ರೇಷ್ಠ ನಟರೇ ಅಲ್ಲದೆ ಉತ್ತಮ ವರ್ಗದ ನಾಟಕಕರ್ತರೂ ಆಗಿದ್ದರು, ಈ ಸಭೆಗಳನ್ನು ನೋಡಿ ದೇಶದಲ್ಲೆಲ್ಲಾ ಅನೇಕ ನಾಟಕಸಭೆಗಳು ಪ್ರಾರಂಭವಾದವು. ಇವುಗಳಲ್ಲಿ "ಚಿಂತಾಮಣಿ ನಾಟಕಸಮಾಜಮ್" (ರಾಜಮಹೇಂದ್ರಿಯಲ್ಲಿ, ನಾಗೇಶ್ವರರಾವ್ ಗುನ್ನೇಶ್ವರರಾವ್ ನೇತೃತ್ವದಲ್ಲಿ), "ಜಗನ್ಮಿತ್ರನಾಟಕ ಸಮಾಜಮ್" (ವಿಜಯನಗರದಲ್ಲಿ ರಾಜಾ ವಿಕ್ರಮದೇವರ ಆಶ್ರಯದಲ್ಲಿ) "ಸುರಭಿ" ಕಂಪನಿಗಳು ಮುಖ್ಯವಾದುವು. ಈ ಸಭೆಗಳ ಸದಸ್ಯರೆಲ್ಲ ಸಾಮಾನ್ಯವಾಗಿ ಒಂದೇ ಮನೆತನಕ್ಕೆ ಸೇರಿದವರು. ಒಂದೊಂದು ಸಭೆಗೂ ಪ್ರತ್ಯೇಕ ನಾಟಕ ಕರ್ತೃವಿರುತ್ತಿದ್ದನು. ಪಾತ್ರಗಳಿಗೆ ಯೋಗ್ಯರಾದ ನಟರನ್ನು ಆರಿಸುವ ಬದಲು ನಟರಿಗೆ ಹೊಂದಿಕೊಳ್ಳತಕ್ಕ ವಸ್ತು ನಿರ್ಮಾಣಕ್ಕೆ ತೊಡಗಿದುದರಿಂದ ಹೆಚ್ಚು ಸಂಖ್ಯೆಯ ಉತ್ತಮ ಮಟ್ಟದ ನಾಟಕಗಳ ರಚನೆಗೆ ಸಾಧ್ಯವಾಗಲಿಲ್ಲ. ಆದರೂ ಕೆಲವು ಶ್ರೇಷ್ಠ ನಾಟಕಗಳು ರಚಿತವಾಗಿ ಜನಪ್ರಿಯವಾದವು.

ಆರಂಭಕಾಲದ ನಾಟಕ ಕರ್ತೃಗಳಲ್ಲಿ ಧರ್ಮಾವರಂ ಕೃಷ್ಣಮಾಚಾರ್ಯರು ಮತ್ತು ಕೋಲಾಚಲಂ ಶ್ರೀನಿವಾಸರಾಯರ ಹೆಸರು ಪ್ರಮುಖವಾಗಿ ಕಾಣುತ್ತದೆ. ಕೃಷ್ಣಮಾಚಾರ್ಯರು ೩೦ ನಾಟಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ೧೩ ಅಚ್ಚಾಗಿವೆ. ಅವರ ನಾಟಕಗಳಲ್ಲಿ "ವಿಷಾದ ಸಾರಂಗಧರ" "ಚಿತ್ರನಳಿನೀಯಂ" "ಪ್ರಹ್ಲಾದ" "ಪಾದುಕಾ ಪಟ್ಟಾಭಿಷೇಕಮ್" ಇವು ಬಹು ಪ್ರಸಿದ್ಧವಾದುವು. ಇವರಿಗೆ "ಆಂಧ್ರನಾಟಕ ಪಿತಾಮಹ" ಎಂಬ ಬಿರುದಿದೆ. ಶ್ರೀನಿವಾಸರಾಯರು ಅನೇಕ ನಾಟಕಗಳನ್ನು ಬರೆದಿದ್ದರೂ ಅವರ ಐತಿಹಾಸಿಕ ನಾಟಕ (ಮೊತ್ತ ಮೊದಲನೆಯ ತೆಲುಗು ಐತಿಹಾಸಿಕ ನಾಟಕ) ವಾದ "ವಿಜಯನಗರ ರಾಜ್ಯಪತನ"ವೇ ಬಹು ಪ್ರಖ್ಯಾತವಾಗಿ ಅವರಿಗೆ ಕೀರ್ತಿಯನ್ನು ತಂದಿರುವುದು. ಚಿಲಕಲಮರ್ತಿ ಲಕ್ಷ್ಮೀನರಸಿಂಹಂ ಅವರು ಅನೇಕ ನಾಟಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ "ಪ್ರಸನ್ನ ಯಾದವಮ್" ಮತ್ತು "ಗಯೋಪಾಖ್ಯಾನಮ್" ಸರ್ವಾದರಣೀಯವಾಗಿದೆ. ಬಲಜೇಪಲ್ಲಿ ಲಕ್ಷ್ಮೀಕಾಂತಂ ಅವರ "ಸತ್ಯ ಹರಿಶ್ಚಂದ್ರ", ಇಚ್ಛಾಪುರಪು ಯಜ್ಞನಾರಾಯಣರ "ರಸಪುತ್ರ ವಿಜಯಂ" ವೇದಂ ವೆಂಕಟರಾಯ ಶಾಸ್ತ್ರಿಗಳ "ಪ್ರತಾಪ ರುದ್ರೀಯಮ್" ವಡ್ಡಾದಿಸುಬ್ಬರಾಯುಡು ಅವರ "ವೇಣೀ ಸಂಹಾರಂ" ಇವು ಇತರ ಪ್ರಸಿದ್ಧ ತೆಲುಗು ನಾಟಕಗಳು. ಉಮ್ಮರ್ ಆಲೀಷಾ ಅವರಿಂದ ರಚಿತವಾದ "ಬಿಲ್ಹಣೀಯಂ" ಪ್ರತ್ಯೇಕ ಸ್ಥಾನವನ್ನಾಕ್ರಮಿಸಿದೆ. ಇವುಗಳ ಜೊತೆಗೆ ತಿರುಪತಿ ವೆಂಕಟೇಶ್ವರ ಕವಿಗಳ 'ಪಾಂಡವೋದ್ಯೋಗಂ' ಮತ್ತು ಇತರ ಭಾರತ ಕಥೆಗಳೂ, ಪಾನುಗಂಟಿ ಲಕ್ಷ್ಮೀನರಸಿಂಹರಾವವರ "ಪಾದುಕಾ ಪಟ್ಟಾಭಿಷೇಕಂ" ಎಂಬುವನ್ನು ಸೇರಿಸಬಹುದು.

ಗುರುಜಾಡ ಅಪ್ಪಾರಾಯರ "ಕನ್ಯಾಶುಲ್ಕ"ವೇ ತೆಲುಗುಭಾಷೆಯ ಪ್ರಥಮ ಸಾಮಾಜಿಕ ನಾಟಕ. ಇದರಲ್ಲಿ ಸಣ್ಣ ಹೆಣ್ಣುಮಕ್ಕಳನ್ನು ವೃಧ್ಧರಿಗೆ ಮಾರುವ ದುಷ್ಟ ಪದ್ಧತಿಯು ತೀವ್ರವಾಗಿ ಖಂಡಿಸಲ್ಪಟ್ಟಿದೆ. ವಿಧವಾವಿವಾಹವು ಪುಷ್ಟೀಕೃತವಾಗಿದೆ. ಇದರಲ್ಲಿ ಬರುವ ಗಿರೀಶನ ಪಾತ್ರವೇ ಅದ್ಭುತವಾಗಿದೆ. ಇದೇ ಮಾದರಿಯವು ವೀರೇಶಲಿಂಗಂ ಅವರ "ಬ್ರಾಹ್ಮವಿವಾಹಮ್" ಮತ್ತು ಕಾಟ್ರೂರಿ ನಾರಾಯಣರಾಯರ "ಕಂಠಾಭರಣಮ್" ಈಚೆಗೆ ವರದಕ್ಷಿಣೆ, ಅಸಮಾನವಿವಾಹ, ಬಲಾತ್ಕಾರ ವಿವಾಹ ಪದ್ಧತಿ, ಮೊದಲಾದ ವಿಷಯಕವಾದ ಅನೇಕ ರೂಪಕಗಳು ಹುಟ್ಟಿವೆ.

ಇತ್ತೀಚಿನ ಐತಿಹಾಸಿಕ ನಾಟಕಗಳಾದ ಉನ್ನವ ಲಕ್ಷ್ಮೀನಾರಾಯಣರಾಯರ "ನಾಯಕುರಾಲು", ದುವ್ವೂರಿ ರಾಮಿರೆಡ್ಡಿಯವರ 'ಕುಂಭರಾಣಾ' ಇವು ಬಹು ಪ್ರಸಿದ್ಧಿಗೆ ಬರುತ್ತಿವೆ. ಶಾತವಾಹನರ, ಕಾಕತೀಯರ, ರೆಡ್ಡಿದೊರೆಗಳ ಪತನದ ವಿವರಗಳು ಸರಿಯಾಗಿ ತಿಳಿದಿಲ್ಲ. ಅವೆಲ್ಲ ಉತ್ತಮ ವಿವರ ತಿಳಿದಿಲ್ಲವಾದುದರಿಂದ ನಾಟಕದ ವಸ್ತುವಾಗಲು ಅರ್ಹವಲ್ಲ. ವಿಜಯ ನಗರದ ಚರಿತ್ರೆಗೆ ಸಂಬಂಧಪಟ್ಟ ಕೆಲವು ನಾಟಕಗಳು ರಚಿತವಾಗಿವೆ.

(16 ನೇ ಪುಟ ನೋಡಿ)

# ಯುವವಾಣಿ

ಅಭಿನವ ತ್ಯಾಗಬ್ರಹ್ಮ

# ಚೆಂಬೈ ವೈದ್ಯನಾಥ ಭಾಗವತರ್

ದಕ್ಷಿಣದ ದ್ವಾರಕಾಕ್ಷೇತ್ರವೆಂದು ಪ್ರಖ್ಯಾತವಾದ ಗುರುವಾಯೂರು ಕೃಷ್ಣ ಮಂದಿರ, ನಯನ ಮನೋಹರವಾಗಿ ಅಲಂಕೃತವಾಗಿದೆ. ಪ್ರದೋಷಕಾಲದ ಪೂಜೆ - ದೀಪಾರಾಧನೆ ನೋಡಲು ಜನ ಗುಂಪು ಗುಂಪು ಸೇರುತ್ತಿದೆ. ಒಂದು ಕಡೆ ಮಂಗಳವಾದ್ಯ ಘೋಷ, ಒಂದು ಕಡೆ ವೇದ ಘೋಷ, ಒಂದು ಕಡೆ ಶ್ರುತಿಮಧುರ ವೀಣಾ ವೇಣು ಮೃದಂಗ ಧ್ವನಿ. ಯಮುನಾತೀರ ವಿಹಾರಿಯಾದ ನಂದಕಿಶೋರ, ದಿವ್ಯಾಲಂಕೃತನಾಗಿ ನಿಂತಿದ್ದಾನೆ. ಸೌಂದರ್ಯವೇ ಸಾಕಾರವಾದಂತೆ, ಲಾವಣ್ಯವೇ ಮೂರ್ತೀಭವಿಸಿದಂತೆ, ಮಾಧುರ್ಯವೇ ಮೈವೆತ್ತಂತೆ ನವಮೋಹನಾಕಾರನಾಗಿ ನಿಂತಿದ್ದಾನೆ. ಆ ಕಸ್ತೂರೀತಿಲಕ, ಆ ಕೌಸ್ತುಭಮಣಿಹಾರ, ಆ ದಿವ್ಯಾಲಂಕೃತವಾದ ಮುದ್ದಾದ ಮೈಕಟ್ಟು, ರತ್ನಕಿರೀಟ, ಕೆಂದುಟಿಗಳ ಮೇಲೆ ಮಿನುಗುವ ಮಂದಹಾಸ, ನಂದನಂದನನ ಅಂದಚೆಂದಗಳು ಯಾರಿಗಾದರೂ ಕಣ್ಮನಗಳನ್ನು ತಣಿಸುವಂತಿದೆ–ಲಾವಣ್ಯಜಲಧಿಯ ಲೋಲ ಲಹರಿಗಳಂತೆ.

ಹರೇ ಗುರುವಾಯೂರಪ್ಪ
ಹರೇ ಗುರುವಾಯೂರಪ್ಪ

ಸಹಸ್ರ ಸಹಸ್ರ ಭಕ್ತರ ಭಾವಪೂರ್ಣ ಜಯಘೋಷ ಮುಗಿಲು ಮುಟ್ಟುವಂತೆ ಮಂದಿರದಲ್ಲಿ ಮಾರ್ಮೊಳಗುತ್ತಿದೆ.

ಗಾನಮೂರ್ತಿಯೂ, ವೇಣುಗಾನಲೋಲನೂ ಆದ ಕೃಷ್ಣನ ಸನ್ನಿಧಾನವೆಂದ ಮೇಲೆ, ಪೂಜಾಕಾಲದಲ್ಲಿ ಯಾವ ವೈಭವಕ್ಕೇನು ಕಡಿಮೆ? ದೇವಾಲಯದ ಪದ್ಧತಿಯಂತೆ ಸಂಗೀತಕ್ಕಾಗಿ ವೇದಿಕೆಯೊಂದು ಆ ಕಡೆ ಸಿದ್ಧವಾಗಿದೆ. ಕರ್ನಾಟಕ ಸಂಗೀತ ಸಂಪ್ರದಾಯದ ದಿಗ್ಗಜೋಪಮ ವಿದ್ವನ್ಮಣಿ, ಸುಮಾರು ಮುಕ್ಕಾಲು ಶತಮಾನ ತಮ್ಮ ವಿದ್ವತ್ ಪ್ರೌಢಿಮೆಯಿಂದ ಅನುಪಮ ಕೀರ್ತಿ ಸಂಪಾದಿಸಿದ, ಲಕ್ಷ ಲಕ್ಷ ರಸಿಕ ಶ್ರೋತೃಗಳನ್ನು ತಮ್ಮ ಕಂಠಶ್ರೀಯಿಂದ ಮಂತ್ರಮುಗ್ಧರನ್ನಾಗಿ ಮಾಡಿದ, ಸಂಗೀತಸಂಪ್ರದಾಯನಿಷ್ಠಾಗರಿಷ್ಠರಾದ, ಸಂಗೀತವನ್ನು ಪಾವನವ್ರತವಾಗಿ ಬಾಳಿನಲ್ಲಿ ಸ್ವೀಕರಿಸಿ, ತನ್ಮೂಲಕ ಕಂಸಧ್ವಂಸಿಯ ಸಂಪೂರ್ಣಕೃಪೆಗೆ ಪಾತ್ರರಾದ, ವಯೋವೃದ್ಧರೂ, ಜ್ಞಾನವೃದ್ಧರೂ, ಸಂಗೀತ ಪ್ರಪಂಚದ ವೃದ್ಧಪಿತಾಮಹರಂತೆ ಗೌರವಪಡೆದವರೂ ಆದ ಶ್ರೀ ಚಂಬೈ ವೈದ್ಯನಾಥ ಭಾಗವತರು – ತಮ್ಮ ಇಷ್ಟದೇವತೆಯಾದ ಗುರುವಾಯೂರು ಕೃಷ್ಣನ ಮುಂದೆ ಹಾಡುತ್ತಾರೆಂದರೆ — ದೇವಮಂದಿರದಲ್ಲಿ ಜನ ಕಿಕ್ಕಿರಿದು ಸೇರಿತ್ತೆಂದರೆ – ಆಶ್ಚರ್ಯವೇನು?

ವಿಭೂತಿ ಭೂಷಿತ ಭವ್ಯಲಲಾಟ; ಗಾತ್ರ ಸಂಗೀತವೇ ಮೈವೆತ್ತು ಬಂದಂತಿದ್ದ ಬೃಹಚ್ಛರೀರ– ಆಜಾನುಬಾಹುವಾದ ಭವ್ಯ ಭದ್ರಾಕೃತಿ, ರುದ್ರಾಕ್ಷಿಮಾಲೆ ಕಂಠದಲ್ಲಿ ಶೋಭಿಸುತ್ತಿದೆ. ನಟಶೇಖರನ ನಿಟಿಲಾಕ್ಷಿಯಂತೆ ಹಣೆಯಲ್ಲಿ ಕುಂಕುಮ–ಪಕ್ಕದಲ್ಲೇ ಪರಮಾಪ್ತ ಶಿಷ್ಯ ಕೈಮುಗಿದು ನಿಂತಿದ್ದಾನೆ. ಆತನೇ ಇಂದಿನ ಪ್ರಸಿದ್ಧ ಸಂಗೀತ ವಿದ್ವಾಂಸ ಯೇಸುದಾಸ್ (ಜೇಸುದಾಸ್) ಶಿಷ್ಯನ ಕಡೆ ಮಂದಹಾಸ ಬೀರುತ್ತ – ಸಭೆಯ ಕಡೆ ಗೌರವ ಭಾವದಿಂದ ನೋಡುತ್ತ ಕೃಷ್ಣನಿಗೆ ಭಕ್ತಿಯಿಂದ ಕೈಮುಗಿಯುತ್ತ ನಿಂತಿದ್ದ ಸಂಗೀತ ಸಾರ್ವಭೌಮರಾದ ಆ ಪರಮ ಗೌರವ ಮೂರ್ತಿ – ಶ್ರೀ ಚಂಬೈ ವೈದ್ಯನಾಥ ಭಾಗವತರ್.

“ಮೆಟ್ಟಿಲು ಹತ್ತಿಹೋಗು–ಸ್ವಾಮಿ ಶಕ್ತಿ ನೀಡುತ್ತಿದ್ದಾನೆ – ಪ್ರೇರೇಪಣೆ ಮಾಡುತ್ತಿದ್ದಾನೆ–”ಎನ್ನುತ್ತಾ ಆ ಗಾಯಕ ಸಾರ್ವಭೌಮ “ನಾರಾಯಣಾಲಯಂ”– ಕಡೆಗೆ ಗಂಭೀರವಾಗಿ ಹೆಜ್ಜೆ ಹಾಕುತ್ತ ಹೊರಟರು. ವೇದಿಕೆಯ ಮೇಲೆ ಮಂಡಿಸಿದರು. ಅಷ್ಟರಲ್ಲಿ ಅವರಿಗೇನು ಪ್ರೇರಣೆಯಾಯ್ತೋ– “ಯೇಸು, ಮುಂದಿನ ವರ್ಷ ಈ ವೇಳೆಗೆ ನಿನ್ನ ಬಾಳಿನಲ್ಲಿ ಎರಡು ಘಟನೆಗಳು ನಡೆಯುತ್ತವೆ. ಒಂದು ಪುತ್ರೋತ್ಸವ–ಎರಡನೆಯದು ನಿನಗೆ ಶ್ರೀ ಗುರುವಾಯೂರಪ್ಪನ ದರ್ಶನ” ಎಂದು ಗಂಭೀರವಾಗಿ ನುಡಿದರು.

ಜೇಸುದಾಸ ಇಂದಿಗೂ ಹೇಳುತ್ತಾರೆ– “ನಾನು ನನ್ನ ಗುರುಗಳಲ್ಲಿ ಗುರುವಾಯೂರು ಪ್ರಭುವನ್ನು ಕಂಡಿದೇನೆ” ಎಂದು!! ಮತಧರ್ಮಗಳ ಬಗ್ಗೆ ಶ್ರೀ ಚಂಬೈರವರದು ಅತ್ಯಂತ ಉದಾರವಾದ ಮನೋಭಾವ– ಸೌಜನ್ಯ ಸೌಹಾರ್ದಪೂರ್ಣವಾದ ಅಭಿಪ್ರಾಯ. ಅವರ ಶಿಷ್ಯ ವಾತ್ಸಲ್ಯವಂತೂ ಸಾಗರಸದೃಶವಾದದ್ದು. ಮಹೋನ್ನತ ಪ್ರತಿಭಾಪೂರ್ಣ ಜ್ಞಾನ ಸಂಪತ್ತು, ಅನುಪಮ ದೈವಭಕ್ತಿ, ಅವ್ಯಾಜ ದಾನಗುಣ, ಪರಿಪಕ್ವವಾದ ಅನುಭವ – ಅದ್ವಿತೀಯ ಸಂಗೀತಶಾಸ್ತ್ರ ಪಾಂಡಿತ್ಯ ಇವೆಲ್ಲವೂ ಚಂಬೈರವರಲ್ಲಿ ಏಕೀಭವಿಸಿದ್ದವು – ಮೂರ್ತೀಭವಿಸಿದ್ದವು.

ಮದ್ರಾಸ್ ನಗರದಲ್ಲಿ ಒಮ್ಮೆ ಭಾಗವತರು ಮಿತ್ರರೊಬ್ಬರ ಮನೆಯಲ್ಲಿ ಬಿಡಾರಮಾಡಿದ್ದರು. ಸಂಜೆಯ ಪೂಜೆ, ಭಜನೆ, ಸಹಸ್ರನಾಮ ಪಾರಾಯಣ ಮುಂತಾದ ಕಾರ್ಯಕ್ರಮ ಅವ್ಯಾಹತವಾಗಿ ಸಾಗಿತ್ತು. ಕೊನೆಯಲ್ಲಿ ಚಂಬೈಯವರು ನಾಲ್ಕು ಕೀರ್ತನೆಗಳನ್ನು ಹಾಡಿದರು. ಬಹುಶಃ ಈ ದೈವೀಗಾನದಿಂದ ಪ್ರೇರಿತರಾಗಿ ಶ್ರೀ ಕುಂಜುಮಣಿಯವರು ಮನೋಜ್ಞವಾದ ಧಾಟಿಯಲ್ಲಿ ಹಾಡಲಾರಂಭಿಸಿದರು. ಇವರು ಶ್ರೀಮಾನ್ ಪಾಪನಾಶಂ ಶಿವನ್‌ರವರ ಶಿಷ್ಯರೂ, ಬಂಧುಗಳೂ ಸಹ – ಎಂಬ ವಿಷಯ ಭಾಗವತರಿಗೆ ತಿಳಿದಿತ್ತು. ಕುಂಜುಮಣಿಯವರ ಸಂಗೀತ ಮುಗಿದಾಗ ಸುಮಾರು ಅರ್ಧರಾತ್ರಿಯಾಗಿತ್ತು. ಚಂಬೈರವರು ಪರಮಾನಂದ ಭರಿತರಾಗಿ ಕೇಳುತ್ತ ಕುಳಿತಿದ್ದರು. “ಮಣಿ ನಿನ್ನ ಸಂಗೀತ ಕೇವಲ ಸಂಗೀತವಲ್ಲ – ಸಂಗೀತ ಭಗವದಾರಾಧನೆಯ ಒಂದು ರೂಪ

ಅನುವಾದ:

**ವಿದ್ವಾನ್ ಬ. ನ. ಗುಂಡೂರಾವ್**

ಎಂಬುದನ್ನು ಸದಾ ನೆನಪಿಟ್ಟುಕೊಂಡಿರು– ದೇವರು ಒಳ್ಳೆಯದನ್ನು ಮಾಡಲಿ–ಎಂದು ತುಂಬು ಅಭಿಮಾನದಿಂದ ಹರಸಿದರು.

ಚಂಬೈರವರು ಸಂಗೀತವಿದ್ವಾಂಸರ ಮನೆತನಕ್ಕೆ ಸೇರಿದವರು. ಅವರ ತಂದೆ ಶ್ರೀ ಅನಂತರಾಮ ಭಾಗವತರು, ತಮ್ಮ ಕಾಲದ ಗೌರವಾನ್ವಿತ ವಿದ್ವಾಂಸರು. ಚಂಬೈರವರ ಪ್ರಾರಂಭದ ಸಂಗೀತಪಾಠ ತಂದೆಯವರಲ್ಲಿ ಶಾಸ್ತ್ರೋಕ್ತವಾಗಿ ನಡೆಯಿತು. ಸಂಸ್ಕಾರದಲ್ಲೇ ಸಂಗೀತ ಬಂದಿತ್ತಾದ್ದರಿಂದ ಚಂಬೈರವರು ಈ ಗಂಧರ್ವ ವಿದ್ಯೆಯಲ್ಲಿ ಅಪ್ರತಿಮ ಪ್ರೌಢಿಮೆಯನ್ನು ಸಾಧಿಸಲು ಹೆಚ್ಚು ಕಷ್ಟ ಪಡಬೇಕಾಗಿರಲಿಲ್ಲ. ಅಂದ ಮಾತ್ರಕ್ಕೆ ಅವರ ಸಂಗೀತ ಸಾಧನೆ ಸಾಧಾರಣ ಮಟ್ಟದ್ದೆಂದು ಯಾರೂ ಭಾವಿಸಲಾಗದು ತಂದೆಯವರು ವಿಧಿಸಿದ ಕಟ್ಟುನಿಟ್ಟಾದ ನಿಯಮ ನಿಬಂಧನೆಗಳನ್ನು – ಶ್ರೇಯಸ್ಸೋಪಾನಗಳೆಂದು ಭಾವಿಸಿ ಚಂಬೈರವರು ತಮ್ಮ ಸಂಗೀತ ಸಾಧನೆಯನ್ನು ಅತ್ಯಂತ ಶ್ರದ್ಧೆಯಿಂದ ನಡೆಸುತ್ತಿದ್ದರು. ಅವರು ಸಾರ್ವಜನಿಕ ಸಮಾರಂಭದಲ್ಲಿ ಪ್ರಪ್ರಥಮವಾಗಿ ಸಂಗೀತ ಕಚೇರಿ–ನಡೆಸಿದ್ದು ಕೇರಳದ ಒಂದು ದೇವಾಲಯದಲ್ಲಿ. ಆಗ ಚಂಬೈರವರ ವಯಸ್ಸು ಕೇವಲ ಒಂಭತ್ತು ವರ್ಷವೆಂದರೆ ಯಾರಿಗಾದರೂ ಆಶ್ಚರ್ಯವಾಗುತ್ತದೆ. ಬುಗುರಿ–ಗೋಲಿ ಆಡುವ ವಯಸ್ಸಿನ ಹುಡುಗ, ಮೂರು ಗಂಟೆ ಕಾಲ, ರಾಗಾಲಾಪನೆಯೊಂದಿಗೆ, ವಿಸ್ತಾರ ಸ್ವರ ವಿನ್ಯಾಸದೊಂದಿಗೆ ಸಂಗೀತ ಹಾಡುವುದೆಂದರೆ ಅದರಲ್ಲೂ ಮಣಿರಂಗುರಾಗದ ದೀಕ್ಷಿತರ ಸಂಸ್ಕೃತ ಕೃತಿ–"ಮಾಮವ ಪಟ್ಟಾಭಿರಾಮ" ಹಾಡುವುದೆಂದರೆ – ಅದು ದೈವದತ್ತವಾದ ದಿವ್ಯಾನುಗ್ರಹವಲ್ಲದೆ ಮತ್ತೆ ಬೇರೇನೂ ಆಗಲು ಸಾಧ್ಯವೇ ಇಲ್ಲ. ಹೀಗೆ ಪ್ರಾರಂಭವಾದ ಶ್ರೀಯುತರ ಸಂಗೀತ ಸಂಪ್ರದಾಯದ ಭೀಷ್ಮ ಪಿತಾಮಹ ಪಟ್ಟಕ್ಕೇರಿಸಿತು. ತಮ್ಮ ತಂದೆಯವರೊಡನೆ, ಸಂಗೀತ ಕಚೇರಿಯಲ್ಲಿ ಸಹಗಾಯಕರಾಗಿ, ಗುರುವಾಯೂರು ಕೃಷ್ಣನ ಸನ್ನಿಧಿಯಲ್ಲಿ ಹಾಡಿದಾಗ ಚಂಬೈ, ಹದಿನಾಲ್ಕು ವರ್ಷದವರಂತೆ!! ಈ ಘಟನೆಯನ್ನು ಅವರು ಪದೇ ಪದೇ ನೆನಪು ಮಾಡಿಕೊಳ್ಳುತ್ತಿದ್ದುದುಂಟು.

1952 ರಲ್ಲಿ, ಶಚೀಂದ್ರದಲ್ಲಿ ಶ್ರೀ ಚಂಬೈರವರ ಕಚೇರಿ ಏರ್ಪಾಟಾಗಿತ್ತು. ಸಂಗೀತ ರಸಿಕ ವೃಂದ ಕಾರ್ಯಕ್ರಮದ ತಾರೀಖನ್ನು ಕುತೂಹಲದಿಂದ ನಿರೀಕ್ಷಿಸುತ್ತಿತ್ತು. ನಿಶ್ಚಿತ ವೇಳೆಗೆ ಕಾರ್ಯಕ್ರಮದಲ್ಲಿ ಭಾಗವಹಿಸುವ ಸಂಪ್ರದಾಯವನ್ನು ಪಾಲಿಸುವ ವಿದ್ವನ್ಮಣಿ ಚಂಬೈರವರ ಆರೋಗ್ಯ ಹಠಾತ್ತನೆ ಕೆಟ್ಟಿತು. ಸಂಗೀತಗಾರರ ಸಂಪತ್ತೆಲ್ಲ ಅವರ ಶಾರೀರ ಸಂಪತ್ತು. ಅವರು ಗಂಟಲ ಬೇನೆಗೆ ತುತ್ತಾದರು. ಧ್ವನಿಯೇ ಹೊರಡದಷ್ಟು ರೋಗ ಉಲ್ಬಣವಾಯ್ತು. ಇನ್ನು ನನ್ನ ಸಂಗೀತದ ವ್ಯವಹಾರ ಮುಗಿಯಿತು. ಎಂದು ಚಂಬೈರವರು ಮಕ್ಕಳಂತೆ ಗಳಗಳನೆ ಅತ್ತುಬಿಟ್ಟರು. ಕಾರ್ಯಕ್ರಮದ ವ್ಯವಸ್ಥಾಪಕರಿಗಿರಲಿ, ಇಡೀ ಸಂಗೀತ ಪ್ರಪಂಚಕ್ಕೆ ಇದು ಸಿಡಿಲು ಬಡಿದಂತಾಯ್ತು. ಹತ್ತಾರು ಬಗೆಯ ಚಿಕಿತ್ಸೆಗಳಾದರೂ ಚಂಬೈ ಚೇತರಿಸಿಕೊಳ್ಳಲಾರರೆಂಬ ಸ್ಥಿತಿಯಾಯ್ತು. ಮಾನವ ಪ್ರಯತ್ನವೆಲ್ಲ ಸೋತುಹೋಯ್ತು. ಆಗ ಅವರಿಗೆ ಒಂದು ದಿನ ಕನಸಿನಲ್ಲಿ ಒಬ್ಬ ಮಹಾಪುರುಷ ದರ್ಶನವಿತ್ತು – ಗುರುವಾ–ಯೂರಿಗೆ ಕೂಡಲೆ ಹೊರಡು, ಕಚೇರಿಯ ಕಾರ್ಯಕ್ರಮ ಇನ್ನು 2–3 ದಿನವಿದೆ. ಆ ವೇಳೆಗೆ ಎಲ್ಲವೂ ಸರಿಹೋಗುತ್ತದೆ. ಗುರುವಾಯೂರು ಕೃಷ್ಣನ ಸೇವೆ ಮಾಡು. ಆ ವೇಣುನಾದ ವಿಶಾರದ – ತನ್ನ ಕೊಳಲ ಇಂಪನ್ನು – ನಿನ್ನ ಗಂಟಲಿಗೆ ನೀಡೇ ನೀಡುತ್ತಾನೆ. ಆತ ಭಕ್ತ ಕಲ್ಪತರು– ಭಾಗ್ಯದ ಸುರಧೇನು. ತಡಮಾಡಬೇಡ– ಕೂಡಲೇ ಹೋಗಿ ಸೇವೆ ಮಾಡಿ ಅನುಗ್ರಹಕ್ಕೆ ಪಾತ್ರನಾಗು – ಎಂದು ಹೇಳಿದರು. ಚಂಬೈರವರಿಗಾದ ಈ ಸ್ವಪ್ನಾನುಭವ ಅವರ ಬಾಳಿನಲ್ಲಿ ಮಹತ್ವಪೂರ್ಣವಾದ ಘಟನೆ. ಮಾರನೇ ದಿನವೇ ಗುರುವಾಯೂರಿಗೆ ಹೊರಟು ಅಲ್ಲಿ ಪರಮ ಶ್ರದ್ಧೆಯಿಂದ ಸೇವೆ ಮಾಡಿದರು. ಪೂಜಾಫಲವೋ – ಪುಣ್ಯಬಲ್ಲವೋ ಅವ್ಯಕ್ತ ಚೇತನದ ಸುವ್ಯಕ್ತ ಕೈವಾಡವೋ ಎಂಬಂತೆ ಶ್ರೀಯುತರ ಗಂಟಲು ಬೇನೆ ಸಂಪೂರ್ಣ ಗುಣವಾಯ್ತು. ನಿಗದಿಯಾದ ಕಚೇರಿಯೂ ಸಹ ಸೊಗಸಾಗಿ ನಡೆಯಿತು. ಅಂದಿನಿಂದ ಶ್ರೀ ಚಂಬೈರವರು ಕೇವಲ ಸಂಗೀತಗಾರರಲ್ಲ ಗುರುವಾಯೂರು ಕೃಷ್ಣನ ಸಂಪೂರ್ಣ ಕೃಪೆಗೆ ಪಾತ್ರರಾದ ದೈವೀಪುರುಷರು–ಭಕ್ತ ಶಿಖಾಮಣಿ. 'ಇದು ನನ್ನ ಧ್ವನಿಯಲ್ಲ ಆತನ ಧ್ವನಿ' ಎಂದವರಿಗರ್ಥವಾಯ್ತು. ಆದದ್ದೆಲ್ಲಾ ಒಳಿತೇ ಆಯಿತು ಎಂಬಂತೆ ಈ ಘಟನೆ ನಡೆದುಹೋಯ್ತು. ದೈವೀ ಕರುಣೆಗೆ ಇದಕ್ಕಿಂತ ಬೇರೆ ನಿದರ್ಶನ ದೊರೆತೀತೇನು?

ಶ್ರೀ ಚಂಬೈರವರು ನಡೆದದ್ದು ಸತ್ಪಥ– ಸದ್ಗುರು ತ್ಯಾಗರಾಜ ಸ್ವಾಮಿ, ದೀಕ್ಷಿತರು, ಶ್ಯಾಮಾಶಾಸ್ತ್ರಿಗಳು. ಷಟ್ಕಾಲ ಚಕ್ರವರ್ತಿ ಗೋವಿಂದ ಮಾರಾರ್...ಮುಂತಾದ ಪುಣ್ಯಜೀವಿಗಳು ಹಾಕಿಕೊಟ್ಟ ಸತ್ಪಥ!!

ಪಾಲ್‌ಘಾಟ್‌ನಲ್ಲಿ ಶ್ರೀಚಂಬೈರವರ ಕಚೇರಿ ಏರ್ಪಾಟಾಗಿತ್ತು. ಆ ಗಾಯಕ ಸಾರ್ವಭೌಮನ ದಿವ್ಯ ಪ್ರತಿಭೆ ಗಾನಗಂಗಾ ಲಹರಿ – ಧೀರ ಗಂಭೀರ ಗತಿಯಿಂದ ಸಾಗುತ್ತಿತ್ತು. ಅಷ್ಟರಲ್ಲಿ ಸಭಿಕರೊಬ್ಬರು ವೇದಿಕೆಗೆ ಬಂದು ಭಾಗವತರ ಪಾದಮುಟ್ಟಿ ನಮಸ್ಕರಿಸಿ ವಿನಯದಿಂದ ಅಲ್ಲೇ ನಿಂತರು. ಏನು ವಿಷಯವೆಂದು ಕೇಳಿದಾಗ ಆತ, ತನ್ನ ಮನವಿಯನ್ನು ನಿವೇದಿಸಿದ. ಮೇಘರಂಜಿನಿ ರಾಗಾಲಾಪನೆ, ತತ್ಸಂಬಂಧವಾದ ತ್ಯಾಗರಾಜಸ್ವಾಮಿಯವರ ಕೀರ್ತನೆ ಕೇಳಬೇಕೆಂದು ಆತನ ಸದಭಿಲಾಷೆ. ಈ ಮಾತು ಕೇಳಿ ಚಂಬೈ ಕ್ಷಣಕಾಲ ಬೆರಗಾದರು. ಈ ರಾಗಕ್ಕೊಂದು ವಿಶೇಷ ಮಹತ್ವವಿದೆ. ವೇದದ ಪರ್ಜನ್ಯಸೂಕ್ತಕ್ಕಿರುವ ಶಕ್ತಿ ಈ ರಾಗಕ್ಕಿದೆ. ಈಗ ನಾನೀ ರಾಗ ಹಾಡಿದರೆ ಸಭೆಗೆ ಅನಿರೀಕ್ಷಿತ ಭಯಂಕರ ಮಳೆಯಿಂದ ತೊಂದರೆಯಾಗಬಹುದು–ಎಂದರು. ಆದರೂ ಚಿಂತೆಯಿಲ್ಲ, ಹಾಡುವ ಕೃಪೆ ಮಾಡೋಣವಾಗಬೇಕೆಂದು ಸಭೆ ಒತ್ತಾಯಮಾಡಿತು. ಚಂಬೈ ನಗುತ್ತ, ಸದ್ಗುರು ತ್ಯಾಗರಾಜ ಸ್ವಾಮಿಯವರಿಗೆ ಕೈಮುಗಿದು ಮೇಘರಂಜನಿ ಪ್ರಾರಂಭಿಸಿದರು. ಹಾಡುತ್ತ ಹಾಡುತ್ತ ಭಾಗವತರ ಮುಖಭಾವದಲ್ಲಿ ಮಾರ್ಪಾಟು ಬರಲಾರಂಭಿಸಿತು. ಕೃಪೆಮಾಡಿ ಕೆಳಗಿಳಿದು ಬಾ ತಾಯಿ ಎಂದು ಬೇಡಿಕೊಳ್ಳುವ ಭಗೀರಥನ ದೈನ್ಯತೆ ಅವರ ಮುಖದಲ್ಲಿ ಕಾಣುತ್ತಿತ್ತು. ಹಿಂದೊಂದು ಸ್ವಲ್ಪ ದಿವಿಜ ನದಿಯ ಆರ್ಭಟದ ಸೊಕ್ಕಣಗಿಸಲು ಸಿದ್ಧನಾದ ಶಿವನ ರೌದ್ರ ಅವರ ಮುಖದಲ್ಲಿ ಕಾಣಿಸುತ್ತಿತ್ತು. ನೆರವಲು. ಸ್ವರವಿನ್ಯಾಸ,

ಕಂಪನ, ಗಮಕ, ಎಲ್ಲವೂ ಶಿವನ ಜಟಾಜೂಟದಂತೆ ವಿಸ್ತಾರವಾಯ್ತು. ಇದು ಸಂಗೀತವೋ ಮಂತ್ರಶಕ್ತಿಯೋ? ಇವರು ಗಾಯಕರೋ ಮಹರ್ಷಿಗಳೋ? ಎಂದು ಸಭಿಕರು ಬೆರಗಾಗಿ ಹೋದರು. ಈ ಸಂಗೀತ ಶಂಕರನಿಗೆ ರುದ್ರಾಭಿಷೇಕವೂ ಆಯ್ತು. ಪಾಲ್‌ಘಾಟಿನ ಪ್ರಜೆಗಳಿಗೆ ಅಪಾರ ಆನಂದವೂ ಆಯ್ತು. ಸಂಗೀತದ ಶಕ್ತಿ ಜಗಜ್ಜಾಹೀರಾಯ್ತು. ಅಂದಿನಿಂದ ಚಂಬೈ ಕೇವಲ ಸಂಗೀತಗಾರರಲ್ಲ. ಪವಾಡಪುರುಷರೂ ಆದರು!!

ಮದುವೆಯೆಂದರೆ ಪುರೋಹಿತರು – ಮಂಗಳವಾದ್ಯಗಳು ಅಗತ್ಯ ಅಥವಾ ಕಾಲ ಕಳೆದಂತೆಲ್ಲಾ ಅನಾವಶ್ಯಕವಾದರೂ ಆಗಬಹುದು. ಆದರೆ ವಧೂವರರಂತೂ ಅತ್ಯಗತ್ಯವಷ್ಟೆ. ಈ ಮಾತು ಗುರುವಾಯೂರು ಕೃಷ್ಣಮಂದಿರದ ಏಕಾದಶಿ ಮಹೋತ್ಸವಕ್ಕೆ ಅನ್ವಯಿಸುತ್ತದೆ. ಅಲ್ಲಿನ ಏಕಾದಶಿ ಮಹೋತ್ಸವವೆಂದರೆ ಶ್ರೀ ಚಂಬೈರವರಿರಲೇಬೇಕು. ಅವರು ಹಾಡಲೇಬೇಕು. ಅವರು ಆ ಉತ್ಸವದ ಅವಿನಾಭಾವ ಅಂಗ!! ಈ ಸಂದರ್ಭದಲ್ಲಿ ಶ್ರೀ ಚಂಬೈರವರು ತಮ್ಮ ಮಿತ್ರರಾದ ಅನೇಕ ಸಂಗೀತ ವಿದ್ವನ್ಮಣಿಗಳನ್ನು ಕರೆಯುತ್ತಿದ್ದುದೂ ಉಂಟು.

ಒಂದು ಸಲ ಕಾಕತಾಳೀಯ ನ್ಯಾಯದಂತೆ ಗುರುವಾಯೂರಿನಲ್ಲಿ ಏಕಾದಶಿ ಮಹೋತ್ಸವ ಮತ್ತು ಚಂಬೈರವರ ಷಷ್ಠ್ಯಬ್ದಪೂರ್ತಿ ಎರಡೂ ಏಕಕಾಲಕ್ಕೆ ಸಂಬಂಧಿಸಿದ್ದು ಆ ಸಂದರ್ಭದಲ್ಲಿ ಆ ಹಿರಿಯರು ಹಾಡಿದ ರೀತಿಯನ್ನು ಕೇಳಿದವರಿಗೆ ಅಮೃತಪಾನವಾದಂತೆ ಭಾಸವಾಗಿತ್ತು. ತಿರುವಯ್ಯಾರ್‌ನಲ್ಲಿ ತ್ಯಾಗಬ್ರಹ್ಮಾರಾಧನೋತ್ಸವದಲ್ಲಿ ಪಂಚರತ್ನ ಕೀರ್ತನೆಗಳನ್ನು ಸಾಮೂಹಿಕವಾಗಿ ಹಾಡುವ ಸಂಪ್ರದಾಯವಿದೆ. ಅದಕ್ಕೊಂದು ವಿಶೇಷ ಮಹತ್ವಪೂರ್ಣ ಇತಿಹಾಸವಿದೆ. ಆ ದಿನ ಬಹುಶಃ ಚಂಬೈರವರು ಗುರುವಾಯೂರು ಮಂದಿರದಲ್ಲಿ ಸದ್ಗುರು ತ್ಯಾಗರಾಜ ಸ್ವಾಮಿಯವರ ದಿವ್ಯ ಸನ್ನಿಧಾನವನ್ನು ಅನುಭವಿಸಬೇಕು. 45 ಮಂದಿ ವಿದ್ವಾಂಸರು ವೇದಘೋಷ ಮಾಡುತ್ತಿದ್ದಾಗ ಅದು ನಿಂತ ಕೂಡಲೇ ಚಂಬೈರವರ ಷಷ್ಠಿಪೂರ್ತಿ ಸೂಚಕವಾಗಿ ಸಂಗೀತ ಪ್ರಪಂಚದ 60 ಮಂದಿ ದಿಗ್ದಂತಿಗಳು ಮಾಡಿದ ಆ ಸಾಮೂಹಿಕ ಪಂಚರತ್ನ ಕೃತಿಗಾಯನ– ನ ಭೂತೋ ನ ಭವಿಷ್ಯತಿ ಎಂಬ ದಿವ್ಯಾನುಭವ!!

ಶ್ರೀ ಚಂಬೈರವರು ಗುರುವಾಯೂರಿನಲ್ಲಿ ಸುಮಾರು 41 ಬಾರಿ ಉದಯಾಸ್ತಮಾನ ಪೂಜೆಯನ್ನು ಆಚರಿಸಿ, ಆ ವ್ರತದ ಸಂಪೂರ್ಣ ಫಲ ಪಡೆದವರು. 41 ನೇ ಪೂಜೆ ಸಲ್ಲಿಸಿದಾಗ ಚಂಬೈರವರಿಗೆ ಎಂಬತ್ತೊಂದು ವರ್ಷವಾಗಿತ್ತು. ಈ ಸಂದರ್ಭದಲ್ಲಿ ಗುರುವಾಯೂರು ಮಂದಿರದಲ್ಲಿ ಚಂಬೈರವರಿಗೆ ವಿಶೇಷ ರೀತಿಯಲ್ಲಿ ಸನ್ಮಾನ ಮಾಡಲಾಯ್ತು. "ಅಭಿನವ ತ್ಯಾಗಬ್ರಹ್ಮ"– ಎಂಬ ಪ್ರಶಸ್ತಿ ಅವರ ಪಾದಾರವಿಂದಗಳಲ್ಲಿ ಅರ್ಪಿಸಲಾಯಿತು. ಪ್ರಶಸ್ತಿ ಅರ್ಪಿಸುವುದೆ?– ಹೌದು ಅವರಿಗೆ "ನೀಡುವ" ಯೋಗ್ಯತೆ ಯಾರಿಗೂ ಇರಲಿಲ್ಲ. ಅವರು ವಯೋವೃದ್ಧರು, ಜ್ಞಾನವೃದ್ಧರು. ಗುರುವಾಯೂರು ಕೃಷ್ಣನ ಸೇವೆ ಮಾಡಿ ಧನ್ಯರಾದವರಲ್ಲಿ, ಆ ದಿವ್ಯ ಮಂಗಳ ಮೂರ್ತಿಯ ಕೀರ್ತಿ ಹಾಡಿ ಹೊಗಳಿ ಧನ್ಯರಾದವರಲ್ಲಿ ಇಬ್ಬರು ಮಹಾವ್ಯಕ್ತಿಗಳು ಪ್ರಸಿದ್ಧರು. ತಮ್ಮ ಪಾಂಡಿತ್ಯಪೂರ್ಣವಾದ ಪ್ರವಚನಗಳ ಮೂಲಕ ಶ್ರೀ ಚೆಂಗಲಿ ಪುರಂ ಅನಂತರಾಮ ಭಾಗವತರು ಪ್ರಸಿದ್ಧರು. ತಮ್ಮ ಗಂಧರ್ವ ಗಾಯನದ ಮೂಲಕ ಶ್ರೀ ಚಂಬೈರವರು ಪ್ರಸಿದ್ಧರು.

ಶ್ರೀ ಮುತ್ತುಸ್ವಾಮಿ ದೀಕ್ಷಿತರು ಹಾಡುತ್ತ ಹಾಡುತ್ತ ಕಣ್ಮುಚ್ಚಿದರಂತೆ!! ಸದ್ಗುರು ತ್ಯಾಗರಾಜಸ್ವಾಮಿಗಳು ಕೊನೆಗಾಲದಲ್ಲಿ ಸನ್ಯಾಸ ಸ್ವೀಕರಿಸಿ 'ತವ ದಾಸೋಹಂ ದಾಶರಥೇ' ಎನ್ನುತ್ತ ಬ್ರಹ್ಮೀಭೂತರಾದರಂತೆ!! ವೇದಮೂರ್ತಿ ಚೆಂಗಲಪುರಂರವರು ಸಹ "ಆಪತ್ಸನ್ಯಾಸ" ಸ್ವೀಕರಿಸಿ ಗುರುವಾಯೂರು ಸ್ವಾಮಿಯ ನಾಮಸ್ಮರಣೆ ಮಾಡುತ್ತ ಐಹಿಕ ವ್ಯಾಪಾರವನ್ನು ತ್ಯಜಿಸಿದವರು!! ಇಂತಹುದೇ ಸನ್ನಿವೇಶ ಶ್ರೀ ಚಂಬೈ ವೈದ್ಯನಾಥ ಭಾಗವತರ ಜೀವನ ಸಂಧ್ಯಾಕಾಲದಲ್ಲೂ ಬಂದಿತ್ತು.

"ಗುರುವಾಯೂರಪ್ಪನೇ– ನನ್ನ ತಾಯಿಯವರ ಪುಣ್ಯತಿಥಿ ಹತ್ತಿರ ಬರುತ್ತಿದೆ. ಈ ವೃದ್ಧಾಪ್ಯ, ಈ ಥಡಿಗ ದೇಹ, ವಯೋಸಹಜವಾದ ಈ ದೌರ್ಬಲ್ಯ, ಓಡಾಡುವುದೇ ಕಷ್ಟವಾಗಿದೆ ಏಳುವುದು ಕೂಡುವುದೇ ಕಷ್ಟವೆನಿಸುತ್ತಿದೆ. ಈ ಸ್ಥಿತಿಯಲ್ಲಿ ತಾಯಿಯ ಶ್ರಾದ್ಧ ಕರ್ಮವನ್ನು ಶಾಸ್ತ್ರೋಕ್ತವಾಗಿ ಮಾಡುವುದು ಹೇಗೆಂದು ನನಗೆ ತುಂಬಾ ಚಿಂತೆಯಾಗುತ್ತಿದೆ. ಕೃಷ್ಣ, ಸಾಕುಮಾಡು. ಬಿಡುಗಡೆ ಮಾಡು, ನಿನ್ನ ಚರಣಾರವಿಂದಗಳಲ್ಲಿ ಈ ಅನಾಥನಿಗೆ ಆಶ್ರಯ ನೀಡಿ ಕಾಪಾಡು."

ಶ್ರೀ ಭಾಗವತರು ಗುರುವಾಯೂರು ಕೃಷ್ಣನ ಮುಂದೆ ಕುಳಿತು ಬೇಡಿಕೊಳ್ಳುತ್ತಿದ್ದಾರೆ. ಅವರ ಬೃಹಚ್ಛರೀರ ಭಾವೋದ್ವೇಗದಿಂದ ಕಂಪಿಸುತ್ತಿದೆ, ಕಣ್ಣೀರ ಧಾರೆ ತಾನೇ ತಾನಾಗಿ ಹರಿದು ಬರುತ್ತಿದೆ. ಪಕ್ಕದಲ್ಲೇ ಇದ್ದ ಪ್ರಿಯ ಶಿಷ್ಯ ಜೇಸುದಾಸ್ ಇದೆಲ್ಲ ನೋಡುತ್ತ ಕಣ್ಣೊರಸಿಕೊಳ್ಳುತ್ತಿದ್ದಾನೆ. ಅದೇ ದಿನ ಸಂಜೆ ಕೃಷ್ಣ ಸನ್ನಿಧಿಯಲ್ಲಿ ಭಾಗವತರ ಸಂಗೀತ ಕಚೇರಿ. ಸಂಸ್ಕೃತ ಶ್ಲೋಕಗಳನ್ನು ರಾಗಮಾಲಿಕೆಗಳ ರೂಪದಲ್ಲಿ ಹಾಡುವ ಕಲೆಯಲ್ಲಿ ಅದ್ವಿತೀಯರಾಗಿದ್ದ ಚಂಬೈರವರು ಕೃಷ್ಣನನ್ನು ಕಣ್ತುಂಬ ನೋಡುತ್ತ ಆನಂದ ತುಂದಿಲರಾಗಿ ಹಾಡುತ್ತಿದ್ದಾರೆ–ಅಗ್ರೇ ಪಶ್ಯಾಮಿ ಯಾದುಕುಲ ತಿಲಕಂ–ಎಂಬ ಶ್ಲೋಕವನ್ನು!! ಭಾಗವತರು ಭಗವಂತನನ್ನು ಆದಿನ ಕಂಡರು ಎಂಬುದರಲ್ಲಿ ಸಂದೇಹವಿಲ್ಲ.

ಇದಾದ ಕೆಲವೇ ದಿನಗಳಲ್ಲಿ ಈ ಸಂಗೀತ ಸಾರ್ವಭೌಮ ಭಗವನ್ನಾಮ ಸ್ಮರಣೆ ಮಾಡುತ್ತ ಐಹಿಕ ವ್ಯಾಪಾರವನ್ನು ತ್ಯಜಿಸಿದರು.

ಆ ತ್ಯಾಗಬ್ರಹ್ಮರೂ ಈ ಅಭಿನವ ತ್ಯಾಗಬ್ರಹ್ಮರೂ ಸೇರಿದ್ದು ಒಂದೇ ಸ್ಥಳಕ್ಕೆ, ಇಬ್ಬರ ಗಮ್ಯಸ್ಥಾನವೂ ಒಂದೇ. ಒಬ್ಬರ ತಂದೆ ರಾಮ ಬ್ರಹ್ಮ!! ಇನ್ನೊಬ್ಬರ ತಂದೆ ಅನಂತರಾಮ!!

ಇವೆರಡೂ ಭಗವದರ್ಪಿತವಾದ ಪುಣ್ಯಜೀವಿಗಳು.

---

ಮೂಲ:

**ಶ್ರೀ ಮಾಧವನ್ ನಂಬೂದರಿ**

(12 ನೆ ಪುಟದಿಂದ)

ಅಬ್ಬೂರಿ ರಾಮಕೃಷ್ಣರಾಯರ 'ನದೀ ಸುಂದರೀ' ಅದ್ಭುತವಾದ ಗೀತನಾಟಕ. ತಲ್ಲಾವಝ್ಝಲು ಶಿವಶಂಕರ ಶಾಸ್ತ್ರಿಯವರು 'ಗೇಯ ನಾಟಕಲು' ಎಂಬ ಪೂರ್ಣ ಪದ್ಯಮಯವಾದ ಅನೇಕ ನಾಟಕಗಳನ್ನು ರಚಿಸಿದ್ದಾರೆ. ವೀರಾಪುರಂ ಯುವರಾಜ ಸಾಹೇಬರೂ ಅನೇಕ ನಾಟಕಗಳ ಕರ್ತೃಗಳು. ಅವುಗಳಲ್ಲಿ 'ಆಲೋಕಂ ನುಂಡೀ ಆಹ್ವಾನಮು' ಪ್ರಸಿದ್ಧವಾದುದು.

ತಾತ್ವಿಕ ಮತ್ತು ದಾರ್ಶನಿಕ ನಾಟಕಗಳು ವಿಶೇಷವಾಗಿಲ್ಲ. ವೀರೇಶಲಿಂಗಂ ಅವರ 'ಪ್ರಬೋಧಚಂದ್ರೋದಯ'ದ ಭಾಷಾಂತರ ಕಾಂಚನಪಲ್ಲಿ ಕನಕರಾಜು ವಿರಚಿತ 'ಹಂಸ ವಿಜಯಮ್' ಇವು ಕೆಲವು ಆ ಜಾತಿಯವು. ಧಾರ್ಮಿಕ ನಾಟಕಗಳು ಅನೇಕವಿವೆ. ಭಾರತ, ಭಾಗವತ, ರಾಮಾಯಣ ವಿಷಯಕವಾದ ಅನೇಕ ನಾಟಕಗಳು ಜನಪ್ರಿಯವಾಗಿವೆ. ಜೀವನದ ಆಳವಾದ ಸಮಸ್ಯೆಗಳನ್ನು ಕುರಿತ ತಾತ್ತ್ವಿಕ ದಾರ್ಶನಿಕ ನಾಟಕಗಳು ಇಲ್ಲವೆಂದೇ ಹೇಳಬಹುದು.

ಏಕಾಂಕ ನಾಟಕಗಳು ಬಹು ಸಂಖ್ಯೆಯಲ್ಲಿ ರಚಿತವಾಗುತ್ತಿವೆ. ಇವು ವಾಚನಕ್ಕೆ ಯೋಗ್ಯವಾದುವೇ ವಿನಾ ಅಭಿನಯನಕ್ಕೆ ಹೊಂದತಕ್ಕವಲ್ಲ. ಇವುಗಳಲ್ಲಿ ಉತ್ತಮವಾದುವೆಲ್ಲಾ ಪ್ರಹಸನಗಳು ಅಥವಾ ವಿಡಂಬನಗಳು. ಚಿಲಕಮರ್ರಿ ಮತ್ತು ವೀರೇಶಲಿಂಗಂ ಇವರುಗಳಿಂದ ರಚಿತವಾದುವು ಸ್ತ್ರೀಯರ ಅಜ್ಞಾನ, ಪಂಡಿತರ ಅರ್ಥವಿಲ್ಲದ ಶುಷ್ಕವಾಗ್ವಾದ, ಮೂಢ ನಂಬಿಕೆಗಳು, ಸಮಾಜದ ದುರಾಚಾರಗಳು, ಜಾತೀಯತೆ, ಗ್ರಾಮಕಲಹ, ಲಂಚರುಷುವತ್ತುಗಳು, ಜನಗಣನೆ ಮೊದಲಾದ ಅನೇಕ ವಿಷಯಗಳನ್ನು ಕುರಿತವಾಗಿವೆ. ಪಾನುಗಂಟಿ ಲಕ್ಷ್ಮೀನರಸಿಂಹಂ ಬಹು ಜನಪ್ರಿಯವಾದ ಹಾಸ್ಯ ನಾಟಕ ಕರ್ತೃ. ಆತನ 'ಸಾಕ್ಷಿ' ಆತನಿಗೆ ವಿಶೇಷ ಪ್ರಖ್ಯಾತಿಯನ್ನುಂಟುಮಾಡಿದೆ. ಹಾಗೆಯೇ ಭಮಿಡಿಪಾಟಿ ಕಾಮೇಶ್ವರರಾವ್, ಜಿ. ವೆಂಕಟಾಚಲಂ ಅವರು ಈ ಕ್ಷೇತ್ರದಲ್ಲಿ ಗಣ್ಯರಾಗಿದ್ದಾರೆ.

ಇತ್ತೀಚಿನ ಕಾಲದಲ್ಲಿ ದೇಶದ ತುಂಬ ನಾಟಕಗಳ ಪ್ರವಾಹವೇ ಹರಿದಿದೆ. ಅಧುನಿಕ ಯುಗದ ಮಾದರಿಯ ಫಲವೆ ನಿ ಸಿ ರು ವ 'ಮುದ್ದುಕೃಷ್ಣ' ಸಾಮಾಜಿಕ ನಾಟಕಗಳನ್ನೂ ರಚಿಸಿದ್ದಾನೆ. ರಂಗದಲ್ಲಿ ಇದು ಬಹುಬೇಗನೆ – ಅದರಲ್ಲೂ ಬಹು ಖ್ಯಾತಿವಂತ ನಟನಾದ ರಾಘವಾಚಾರಿ ಇದರ ಮುಖ್ಯ ಪಾತ್ರವನ್ನು ವಹಿಸಿದಾಗ - ಬಹು ಜನಪ್ರಿಯವಾಯಿತು.

ಜಿ. ಸೀತಾರಾಮ ಶಾಸ್ತ್ರಿಯವರ 'ಆಂಧ್ರ ನಾಟಕ ರಂಗಮು' ಎಂಬ ಗ್ರಂಥದಲ್ಲಿ ನಾಟಕಗಳ ಸರ್ವವಿಷಯಕವಾದ ದೀರ್ಘ ವಿಮರ್ಶೆಯಿದೆ. ಪುರಾಣಪು ಸೂರಿಯವರ 'ಆಂಧ್ರ ನಾಟಕ ಸಂಸ್ಕರಣಮು' ಮತ್ತು ಆರ್. ಅನಂತ ಕೃಷ್ಣ ಶರ್ಮರ 'ನಾಟಕೋಪನ್ಯಾಸಮುಲು' ಇತರ ಇಂತಹ ಕೃತಿಗಳು.





ಸ್ವರ್ಣೋತ್ಸವಕ್ಕೆ ಮುಖ್ಯಮಂತ್ರಿ ದಂಪತಿಗಳನ್ನು ವೇದೋಕ್ತ ಸ್ವಾಗತಿಸುತ್ತಿರುವಿಕೆ.



ಸ್ವರ್ಣೋತ್ಸವದ ಸಂಬಂಧದಲ್ಲಿನ ಹೋಮದಲ್ಲಿ ಭಾಗವಹಿಸುತ್ತ ಮುಖ್ಯಮಂತ್ರಿ ದಂಪತಿಗಳು.

ಪುಸ್ತಕಗಳ ಬಿಡುಗಡೆಯ ಸಮಯದಲ್ಲಿ ಆಯಾ ಪುಸ್ತಕಗಳ ಕರ್ತೃಗಳನ್ನು ಅಭಿನಂದಿಸುತ್ತಿರುವ ಮುಖ್ಯಮಂತ್ರಿ. (ಬಲಗಡೆಯಿಂದ) ಡಾ॥ ಪಿ. ಅರ್ಕಸೋಮಯಾಜಿ, ಡಾ॥ ವಿದ್ವಾನ್ ವಿಶ್ವಂ, ಸ್ವಾಮಿ ಕೃಷ್ಣದಾಸ್, ಡಾ॥ ಕರುಣಶ್ರೀ, ಶ್ರೀ ಆರ್. ಸೂರ್ಯನಾರಾಯಣ ಮೂರ್ತಿ, ಡಾ॥ ಇ. ಪಾಂಡುರಂಗರಾವ್, ಡಾ॥ ಪಿ. ರಾಮಚಂದ್ರುಡು, ಡಾ॥ ಎಂ. ಸಂಗಮೇಶಂ, ಶ್ರೀಮತಿ. ಆರ್. ಇಂದಿರಾದೇವಿ, ಶ್ರೀ ಎ. ಅನಂತರಾಮಯ್ಯ, ಶ್ರೀ ಕೆ. ಅಪ್ಪಣ್ಣಾಚಾರ್ಯ, ಡಾ॥ ಎಸ್. ಬಿ. ರಘುನಾಥಾಚಾರ್ಯ.



ಸ್ವರ್ಣೋತ್ಸವ ಸಂಚಿಕೆಯನ್ನು ಬಿಡುಗಡೆ ಮಾಡಿದ ಶ್ರೀಮತಿ ಬಸವತಾರಕಂ ಅವರು ಅದರ ಪ್ರತಿಯನ್ನು ಮುಖ್ಯಮಂತ್ರಿಗಳಿಗೆ ನೀಡುತ್ತಿರುವಿಕೆ.





← ಸ್ವರ್ಣೋತ್ಸವದ ನೆನಪಿನ ಕ್ರೋಟನ್ ನೆಡುತ್ತ ಮುಖ್ಯಮಂತ್ರಿ



'ಮತ–ವಿಜ್ಞಾನ' ಚರ್ಚಾಸ್ಪರ್ಧೆಯಲ್ಲಿ ಗೆದ್ದ ಅಭ್ಯರ್ಥಿಗಳಿಗೆ ಬಹುಮಾನ ವಿತರಣೆ. ಶ್ರೀ ಸುಶೀಲ್ ಸೇಠ್ (ಜಾದವಪುರ ವಿ. ವಿ.) ಕು॥ ಜ್ಯೋತಿಕಲಭಾಗ್ (ಕರ್ನಾಟಕ ವಿ. ವಿ.) ಕು॥ ಲತಾ. ವಿ. ಪಂಡಿತ್ (ಗುಲ್ಬರ್ಗ ವಿ. ವಿ.)

ಸ್ವರ್ಣೋತ್ಸವ ಸಂದರ್ಭದಲ್ಲಿ ತಿ. ತಿ. ದೇ. ಉದ್ಯೋಗಿಗಳನ್ನು ಅಭಿನಂದಿಸುತ್ತ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್.





ಸಂಗೀತ ಸಭೆಯಲ್ಲಿ ಅನ್ನಮಾಚಾರ್ಯ ಕೀರ್ತನೆಗಳನ್ನು ಹಾಡಿ ರಂಜಿಸಿದ ಶ್ರೀಮತಿ ಶೋಭಾರಾಜು.



ಧಾರ್ಮಿಕ ಉಪನ್ಯಾಸ ನೀಡುತ್ತ ಪುಷ್ಪಗಿರಿ ಪೀಠಾಧಿಪತಿಗಳು, ಶ್ರೀ ಶ್ರೀ ಚಿನ್ಮಯಾನಂದ ಸ್ವಾಮಿ, ಡಾ॥ ದಾಶರಥಿ, ಡಾ॥ ಆರ್. ಬಾಲರಾಜು.



ಧಾರ್ಮಿಕ ಉಪನ್ಯಾಸಗಳನ್ನು ನೀಡುತ್ತಿರುವ (ಎಡದಿಂದ) ಶ್ರೀ ಶ್ರೀ ತ್ರಿವಿಕ್ರಮಾನಂದ ರಾಮಾನಂದ ಭಾರತೀಸ್ವಾಮಿ, ಶ್ರೀ ಶ್ರೀ ರಾಮಕೃಷ್ಣಾನಂದ ಸ್ವಾಮಿ, ಡಾ॥ ಪ್ರಸಾದರಾಯ ಕುಲಪತಿ, ಶ್ರೀ ಬೋಯಿ ಭೀಮನ್ನ, ಶ್ರೀ ನಂಡೂರಿ ರಾಮಕೃಷ್ಣಮಾಚಾರ್ಯ.



ಸ್ವರ್ಣೋತ್ಸಗಳಲ್ಲಿ ಹೂವಿನ ಅಲಂಕಾರಗಳ ಸ್ಪರ್ಧೆಯಲ್ಲಿ ಗೆದ್ದವರಿಗೆ ಬಹುಮಾನ ವಿತರಣೆ ಮಾಡಲಾಯಿತು. ಬಹುಮಾನ ವಿತರಣೆ ಮಾಡುತ್ತ ಶ್ರೀಮತಿ ನಿರ್ಮಲಾ ಕುಮಾರಸಾಮಿರೆಡ್ಡಿ, ಸ್ವೀಕರಿಸುತ್ತ ಕು॥ ಪಿ. ಟಿ. ವಂದ.



ಧಾರ್ಮಿಕ ಉಪನ್ಯಾಸ ನೀಡುತ್ತ ಶ್ರೀ ಮಧುನಾಪಂತುಲ ಸತ್ಯನಾರಾಯಣಶಾಸ್ತ್ರಿ, ಶ್ರೀ ಶ್ರೀ ನಿರ್ಮಲಾನಂದ ಸ್ವಾಮಿ, ತಿ.ತಿ.ದೇ. ಬೋರ್ಡ್ ಸದಸ್ಯೆ ಶ್ರೀಮತಿ ನನ್ನಪನೇನಿ ರಾಜಕುಮಾರಿ.

# ಅನ್ನಮಾಚಾರ್ಯರ 576ನೇ ಜಯಂತಿ



ಸಾಹಿತ್ಯ ಸಭೆಯಲ್ಲಿ ಶ್ರೀ ಎಂ. ಕೊಂಡ ಮಾಚಾರ್ಯ ಅವರಿಗೆ ಸತ್ಕಾರ ಮಾಡುತ್ತ ಶ್ರೀ ಸುಬ್ಬರಾಯುಲು.



ತಿ. ತಿ. ದೇ. ಆಡಳಿತ ಕಚೇರಿಯಿಂದ ಆರಂಭವಾದ ಮೆರವಣಿಗೆ.



ಅನ್ನಮಾಚಾರ್ಯ ಹರಿಕಥೆ ಮಾಡುತ್ತ ಶ್ರೀ ಸುದರ್ಶನ ಭಟ್ಟಾಚಾರ್ಯ.



ಸಾಹಿತ್ಯ ಸಭೆಯಲ್ಲಿ ಮಾತನಾಡುತ್ತ ಶ್ರೀ ಬಿ. ಸುಬ್ಬರಾಯುಲು, ಕುಳಿತವರು ಎಡದಿಂದ ಶ್ರೀ ಎಂ. ಕೊಂಡಮಾಚಾರ್ಯ, ಶ್ರೀ ಜಿ. ರಾಮಸುಬ್ಬಶರ್ಮ, ಶ್ರೀ ಎಸ್. ಲಕ್ಷ್ಮಣಯ್ಯ.



ಸಂಗೀತ ಸಭೆಯಲ್ಲಿ ಗಾಯಕಿ ಶ್ರೀಮತಿ ಜಯಾಪಶುಪತಿ ಹಾಗೂ ವೃಂದ.



ಸಾಹಿತ್ಯ ಸಭೆಯಲ್ಲಿ ಡಾ॥ ಎಂ. ಸಂಗಮೇಶಂ ಅವರಿಗೆ ಸನ್ಮಾನ ಮಾಡುತ್ತಿರುವ ಶ್ರೀ ಪಶುಪತಿ.

ಸಾಹಿತ್ಯ ಸಭೆಯಲ್ಲಿ ಡಾ॥ ಕರುಣಶ್ರೀ, ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ ಕುಮಾರಸ್ವಾಮಿರೆಡ್ಡಿ, ಶ್ರೀ ಸಮುದ್ರಾಲ ಲಕ್ಷ್ಮಣಯ್ಯ.





ಸಂಗೀತಸಭೆಯಲ್ಲಿ ಶ್ರೀ ರಾಮನಾಥನ್ ಹಾಗೂ ವೃಂದ.



ಸಂಗೀತಸಭೆಯಲ್ಲಿ ಶ್ರೀ ನೂಕಲ ಚಿನ ಸತ್ಯನಾರಾಯಣ ಹಾಗೂ ವೃಂದ.





ಸಾಹಿತ್ಯ – ಸಂಗೀತ – ಚಿತ್ರಲೇಖನ ಸಭೆಯಲ್ಲಿ ಗಾಯನ ಶ್ರೀ ನಾಗೇಶ್ವರ. ವ್ಯಾಖ್ಯಾನ ಶ್ರೀ ಇ. ಕರುಣಾಕರನ್. ಚಿತ್ರಲೇಖನ – ಶ್ರೀ ಕೆ. ಎಂ. ಡಿ. ಹೆನ್ರಿ ಹಾಗೂ ವೃಂದ.

# ಧಾರ್ಮಿಕ ಶಿಕ್ಷಣದ ಬೇಸಿಗೆ ಶಿಬಿರ




ಶಿಕ್ಷಣಶಿಬಿರದ ಆರಂಭ. ಮಾತನಾಡುತ್ತಿರು
ವವರು ಡಾ॥ ಎಂ. ಡಿ. ಬಾಲಸುಬ್ರಹ್ಮಣ್ಯಂ.



ಶಿಕ್ಷಣ ಶಿಬಿರದ ಮುಕ್ತಾಯ ಸಮಾರಂಭದಲ್ಲಿ
ಮಾತನಾಡುತ್ತ ಸಹಕಾರ್ಯ ನಿರ್ವಹಣಾಧಿಕಾರಿ
ಶ್ರೀ ಡಿ. ಸುಬ್ಬರಾಯುಲು.

ಶಿಕ್ಷಣಾರ್ಥಿ ಶಿಕ್ಷಕರಿಗೆ ತಿ. ತಿ. ದೇ.
ಧಾರ್ಮಿಕ ಪುಸ್ತಕ ವಿತರಣೆ. ↓



ಬೆಂಗಳೂರಿನಲ್ಲಿ

# ದಾಸ ಸಾಹಿತ್ಯ ದರ್ಶಿನಿ





ಪುಸ್ತಕ ಬಿಡುಗಡೆಯಲ್ಲಿ ಮಾತನಾಡುತ್ತ ಕರ್ನಾಟಕದ ವಾರ್ತಾಮಂತ್ರಿ ಶ್ರೀ ಎಂ. ರಘುಪತಿ. ಬಲಗಡೆಗೆ ಮಾತನಾಡುತ್ತಿರುವ ಡಾ॥ ವಿ. ಎಸ್. ಆಚಾರ್ಯ.



ದಾಸಸಾಹಿತ್ಯ ಪ್ರದರ್ಶಿನಿಯ ಒಂದು ದೃಶ್ಯ, ಪ್ರೇಕ್ಷಕರ ಒಂದು ನೋಟ.

ಹರಿಕಥೆ ಮಾಡುತ್ತ ಶ್ರೀ ಶಿವಮೊಗ್ಗ ಶ್ರೀನಿವಾಸದಾಸರು, ಹರಿಕಥಾಮೃತಸಾರದ ಬಗ್ಗೆ ಮಾತನಾಡುತ್ತ ಶ್ರೀ ಬನ್ನಂಜೆಗೋವಿಂದಾಚಾರ್ಯ, ಹರಿಕಥೆ ಮಾಡುತ್ತ ಶ್ರೀ ಭದ್ರಗಿರಿ ಅಚ್ಯುತದಾಸರು.









# ಗೃಹಲಕ್ಷ್ಮಿ





ಕನ್ನಡ ಹರಿದಾಸ ಸಾಹಿತ್ಯವನ್ನು ಬೆಳಸಿ ಬೆಳಗಿಸಿದ ಯತಿವರ್ಯರಲ್ಲಿ ಮಹಾಮಹಿಮರಾದ ಶ್ರೀವಾದಿರಾಜರು ಅಗ್ರಗಣ್ಯರು. ಅವರು ಅಪಾರ ಪಾಂಡಿತ್ಯ ಪೂರ್ಣವಾದ ಸಂಸ್ಕೃತ ಉದ್ಗ್ರಂಥಗಳನ್ನು ರಚಿಸಿರುವಂತೆ, ಸಾಮಾನ್ಯ ಜನತೆಗೂ ಅರ್ಥವಾಗುವ ಸರಳವಾದ ನೂರಾರು ಕನ್ನಡ ಹಾಡುಗಳನ್ನು ಬರೆದು ನಮಗೆ ಮಹೋಪಕಾರ ಮಾಡಿದ್ದಾರೆ. ವಾದಿರಾಜರು ರಚಿಸಿರುವ ಲಕ್ಷ್ಮೀಶೋಭಾನೆ ಹಾಡು ಗಾತ್ರದಲ್ಲಿ ಕಿರಿದಾದರೂ ಬಹು ಸುಂದರವಾದ ಕೃತಿ. ಮಹಿಮಾನ್ವಿತವಾದುದೂ ಹೌದು.

ಈ ಕೃತಿಯ ರಚನೆಗೆ ಒಂದು ಹಿನ್ನೆಲೆಯಲ್ಲಿ ಒಂದು ಕಥೆ ಇದೆ. ಸ್ವಾದೀ ಸಂಸ್ಥಾನದ ಅರಸು ಅರಸಪ್ಪನಾಯಕ ವಾದಿರಾಜರ ಮಹಾಭಕ್ತ. ಒಮ್ಮೆ ಅವನ ಅಳಿಯ ಚಿಕ್ಕವಯಸ್ಸಿನಲ್ಲಿಯೆ ಮೃತನಾದ. ಪತಿ ವಿರಹ ತಪ್ತಳಾದ ರಾಜಕುಮಾರಿ ಪ್ರಾಣತ್ಯಾಗಮಾಡಲು ಸಿದ್ಧಳಾದಳು. ತನ್ನನ್ನು ರಕ್ಷಿಸಬಲ್ಲವರು ವಾದಿರಾಜರಲ್ಲದೆ ಅನ್ಯರಲ್ಲವೆಂದು ಅರಸಪ್ಪನಾಯಕ ಅವರ ಮೊರೆ ಹೊಕ್ಕ. ಶಿಷ್ಯ ಪ್ರೇಮದಿಂದ ಪ್ರೇರಿತರಾಗಿ ವಾದಿರಾಜರು ಈ ಲಕ್ಷ್ಮೀಶೋಭಾನೆಯನ್ನು ರಚಿಸಿ, ಪರಮಾತ್ಮನನ್ನು ಸ್ತುತಿಸಿ, ಪ್ರಾರ್ಥಿಸಿ, ಅರಸನ ಅಳಿಯನನ್ನು ಬದುಕಿಸಿದರು. ಮಹಾಕೃತಜ್ಞತೆಯಿಂದ ಅರಸಪ್ಪನಾಯಕನು ಸ್ವಾದೀ ಸಂಸ್ಥಾನದ ಹದಿನಾರು ಸಾವಿರ ವರಹ ಸೀಮೆಯನ್ನು ವಾದಿರಾಜರಿಗರ್ಪಿಸಿ ಕೃತಾರ್ಥನಾದ. ಇಂದಿಗೂ ಈ ಕೃತಿಯನ್ನು ವಿವಾಹ ಮಂಟಪದಲ್ಲಿ ಹಾಡಿದರೆ ವಧುವಿನ ಮುತ್ತೈದೆಭಾಗ್ಯ ಹೆಚ್ಚುವುದೆಂಬ ಪ್ರತೀತಿ ಇದೆ.

'ಲಕ್ಷ್ಮೀಶೋಭಾನೆ' ಸರಳ ಸುಂದರವಾದ ತ್ರಿಪದಿಯ ಧಾಟಿಯಲ್ಲಿ ರಚಿತವಾದ ಕೃತಿ. ಗೃಹಿಣಿಯರು ಗೃಹಕೃತ್ಯವನ್ನು ನಿರ್ವಹಿಸುತ್ತಿರುವಾಗಲೇ ಇದನ್ನು ಹಾಡಿಕೊಳ್ಳಬಹುದು. ಕಿವಿಗೆ ಇಂಪಾಗಿಯೂ ಇರುವ. 108 ನುಡಿಗಳ ಈ ಕೃತಿ ಫಲಶ್ರುತಿಯೂ ಸೇರಿದರೆ 112 ಆಗುತ್ತದೆ. ಕೇಳುತ್ತಿರುವವರನ್ನು ಮರುಳುಗೊಳಿಸುವ ಮಹಶ್ಶಕ್ತಿಯಿದೆ ಈ ಕೃತಿಗೆ. ಅನೇಕ ನುಡಿಗಳ ಅಂತ್ಯದಲ್ಲಿ 'ರಕ್ಷಿಸಲಿ ನಮ್ಮ ವಧೂವರರ' 'ಸಲಹಲಿ ನಮ್ಮ ವಧೂವರರ' ಎಂಬ ಹರಕೆಯಿದೆ. ಇದು ಪುಟ್ಟ ಪುಸ್ತಕದ ರೂಪದಲ್ಲಿ ಕರ್ನಾಟಕದ ಎಲ್ಲೆಡೆಗಳಲ್ಲಿಯೂ ದೊರೆಯುತ್ತದೆ.

## ಲಕ್ಷ್ಮೀಶೋಭಾನೆ ಹಾಡು

'ಲಕ್ಷ್ಮೀಶೋಭಾನೆ'ಯ ಕಥೆ ಲಕ್ಷ್ಮೀದೇವಿಯ ಅವತಾರ ಮತ್ತು ಸ್ವಯಂವರ. 'ಶೋಭಾನವೆನ್ನಿರಿ ಸುರಹೊಳು ಸುಭಗನಿಗೆ. ಶೋಭಾನವೆನ್ನಿರಿ ಸುಗುಣನಿಗೆ, ಶೋಭಾನವೆನ್ನೀರೆ ತ್ರಿವಿಕ್ರಮ ರಾಯಗೆ' ಎಂಬ ಶುಭಾಶಂಸನದಲ್ಲಿ ಹಾಡು ಪ್ರಾರಂಭವಾಗುತ್ತದೆ. ಮೊದಲಲ್ಲಿ ಲಕ್ಷ್ಮೀನಾರಾಯಣರ ಚರಣಕ್ಕೆ ನಮಿಸಿ ಅವರು ಅನುದಿನ ರಕ್ಷಿಸಲಿ ನಮ್ಮ ವಧೂವರರ ಎಂದು ಪ್ರಾರ್ಥಿಸುತ್ತಾರೆ. "ಪಾಲ ಸಾಗರವನ್ನು ಲೀಲೆಯಲ್ಲಿ ಕಡೆಯಲು ಬಾಲೆ ಮಹಾಲಕ್ಷುಮಿ ಉದಿಸಿದಳು". ಎರಡು ಹಸ್ತಗಳಲ್ಲಿ ಕಮಲಗಳನ್ನು ಹಿಡಿದು, ಒಂದು ಕರದಿಂದ ಅಭಯವನ್ನು ಮತ್ತೊಂದು ಕರದಿಂದ ವರಗಳನ್ನು ಅನುಗ್ರಹಿಸುತ್ತ 'ಕುಂದಿಲ್ಲದಾನಂದ ಸಂದೋಹ ಎನಿಸುವ ಇಂದಿರೆ' ಪೀತಾಂಬರವನ್ನು ಧರಿಸಿ ಕ್ಷೀರಸಾಗರದಿಂದ ಮೇಲೆದ್ದು ಬಂದಳು. ಆ ದೇವಿಯ ದಿವ್ಯ ಮಂಗಳಕರ ಸೌಂದರ್ಯವನ್ನು ವಾದಿರಾಜರು ಮನದುಂಬಿ ವರ್ಣಿಸಿದ್ದಾರೆ. ಅದನ್ನು ಪಠಿಸುತ್ತಿದರೆ ನಮ್ಮ ಕಣ್ಣುಗಳ ಮುಂದೆ ದೇವಿಯ ಪ್ರತ್ಯಕ್ಷಳಾದಂತೆ ಭಾಸವಾಗುತ್ತದೆ. ಅಂಬುಜ ನಯನಗಳ, ಬಿಂಬಾಧರದ, ತುಂಬಿ ಗುರುಳ ಮುಖ ಕಮಲದ, ಕುಂಭಕುಚದ ನಳಿನಳಿಸುವ ಮುದ್ದು ಮೊಗದ ಚೆಲುವೆ ಮಹಲಕ್ಷುಮಿ ನಯನ ಮನೋಹರವಾದ ಅಲಂಕಾರದಿಂದ ಸೌಂದರ್ಯದ ಅಧಿದೇವತೆಯಂತೆ ಕಂಗೊಳಿಸುತ್ತಿದ್ದಳು. ಸುತ್ತಿನ ಓಲೆ, ಕಸ್ತೂರಿ ತಿಲಕ, ಶಶಿಬಿಂಬದಂತೆಸೆವ ಮೂಗುತಿಮಣಿ, ಮುತ್ತಿನಕ್ಷತ್ರೆ, ನವರತ್ನದ ಮೊಲೆಗಟ್ಟು, ಚಿನ್ನದಾಭರಣ, ಹೊಳೆವ ಕಾಂಚಿಯ ಧಾಮ, ಮೆಲ್ಲನೆ ಹೆಜ್ಜೆಯನ್ನಿಡಲು ಉಲಿವ ಕಿಂಕಿಣಿಗಳು, ಘಲುಕೆನುವ ಕಾಲಂದಿಗೆ, ಕುಂದ, ಮಂದಾರ, ಜಾಜಿ ಕುಸುಮಗಳಿಂದ ಸಿಂಗರಿಸಿದ ಕೇಶರಾಶಿ, ದೇವಿಯನ್ನು ಆ ಸುರಸಭೆಯೇ ಮೂಕವಿಸ್ಮಿತವಾಗಿ ನೋಡತೊಡಗಿತು. ಲಕ್ಷ್ಮೀದೇವಿ ಎಂದೆಂದು ಬಾಡದ ಅರವಿಂದ ಮಾಲೆಯನ್ನು ಕೊರಳಲ್ಲಿ ಧರಿಸಿ, ಅಂತಹುದೇ ಸ್ವಯಂವರ ಮಾಲೆಯನ್ನು ಕೈಯಲ್ಲಿ ಹಿಡಿದು

**ಶ್ರೀ ಸುಮನ ಬದರೀನಾಥ್**

ಸಾಲಾಗಿ ಕುಳಿತಿದ್ದ ಸುರಸಭೆಯಲ್ಲಿ ಮೆಲ್ಲ ಮೆಲ್ಲನೆ ನಡೆತಂದಳು.

ಆ ದೇವ ಸಭೆಯಲ್ಲಿದ್ದವರಲ್ಲಿ ತನಗೆ ತಕ್ಕ ಪತಿ ಯಾರೆಂದು ಮನದಲ್ಲಿ ಆಲೋಚಿಸುತ್ತ. ಒಬ್ಬೊಬ್ಬರ ಗುಣ ದೋಷಗಳನ್ನೂ ಎಣಿಸಿದಳು. ಒಬ್ಬರು ಘೋರತಪವನ್ನು ಮಾಡಿ ಪುಣ್ಯವನ್ನು ಗಳಿಸಿದ್ದರೂ ಶೀಘ್ರ ಕೋಪದಿಂದ ಶಾಪ ಕೊಡುವವರು, ಅವರು ಹೆಣ್ಣಿನ ಮನಸ್ಸನ್ನು ಒಲಿಸಬಲ್ಲರೆ. ಕಾಮದ ಸೆಳೆತಕ್ಕೆ ಮನವ ತೆತ್ತವರೇ ಬಹುಮಂದಿ, ಕಾಮನಿರ್ಜಿತನೊಬ್ಬ, ಕಾಮಿನಿಗೆ ಸೋತೊಬ್ಬ. ಭಾಮಿಯ ಹಿಂದೆ ಹಾರಿದವ, ಕಾಮಾಂಧನಾಗಿ ಮುನಿಯ ಕಾಮಿನಿಗೆಯ್ದುದನೊಬ್ಬ ಕಾಮದಿ ಗುರುತಲ್ಪಗಾಮಿಯೊಬ್ಬ, ಇಂತಹವರು ತನಗೆ ತಕ್ಕವರೆ' ಎಂದು ಮುಂದೆ ಸರಿದಳು. ಧರ್ಮವಿರುವವರಲ್ಲಿ ತಕ್ಕ ಗುಣವಿಲ್ಲ. ಮತ್ತೊಬ್ಬನಲ್ಲಿ ಕ್ಷಮಾಗುಣಕ್ಕೆ ಅಭಾವ, ಇನ್ನೊಬ್ಬನು ನಶ್ವರವಾದ ಐಶ್ವರ್ಯವನ್ನು ಬಯಸುವವನು. ಒಬ್ಬನಿಗೆ ಒಂದೇ ಕಣ್ಣು. ಪಾದದಲ್ಲಿ ಕಣ್ಣು ಬೇರೊಬ್ಬನಿಗೆ. 'ಸುಖದುಃಖವೆಂಬ ಬೊಮ್ಮಾದಿ ಜೀವರು, ದುಃಖಕೆ ದೂರಳೆನಿಪ ಎನಗೆ ಣೆಯೆ'ಎಂದು ಮನದಲ್ಲಿ ಎಣಿಸಿ,'ಒಂದೊಂದು ಗುಣಗಳು ಇದ್ದಾವು ಇವರಲ್ಲಿ ಸಂದಣಿಸಿವೆ ಬಹುದೋಷ, ಕಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು' ಇಂದಿರೆ ಪತಿಯ ನೆನೆದಳು. ದೇವ ದೇವನಾದ ಶ್ರೀಮನ್ನಾರಾಯಣನ ಮಹಾ ಮಹಿಮೆಗಳನ್ನು ಅನೇಕ ವಿಧದಲ್ಲಿ ಮನದಲ್ಲಿ ಸಂಭಾವಿಸುತ್ತ, ಅವನ ಚರಣ ಕಮಲಗಳನ್ನು ಹೊಂದಲು ದೇವಿ ನಿಶ್ಚಯಿಸಿದಳು. ಕಂದರ್ಪ ಕೋಟಿಗಳ. ಗೆಲುವ ಸೌಂದರ್ಯದ ಚೆಲುವ ತ್ರಿವಿಕ್ರಮ ರಾಮನ ಕೊರಳಿಗೆ ನಾನಾ ಕುಸುಮಗಳಿಂದ ಕೋದ ಸಂವರಣ ಮಾಲೆಯನ್ನು ಅರ್ಪಿಸಿದಳು.

ಆಗ ಮಂಗಳವಾದ್ಯಗಳು ಮೊಳಗಿದವು. ಸಾಗರಕ್ಕೆ ಸಾಗರವೇ ಮಂಗಳ ನಿನಾದದಿಂದ ಕಲ್ಲೋಲಗೊಂಡಿತು. ಸಮುದ್ರ ದೇವ ಷೋಡಶೋಪಚಾರದಿಂದ ಅಳಿಯನನ್ನು ಪೂಜಿಸಿ ಮಗಳನ್ನು ಮಹದಾನಂದ ಧಾರೆಯೆರೆದ. ವಶಿಷ್ಠ, ನಾರದ ಮೊದಲಾದ ಮುನೀಂದ್ರರು ವೇದೋಕ್ತ ಮಂತ್ರಗಳನ್ನು ಪಠಿಸಿ, ವಧೂವರರ ಮೇಲೆ ಶೋಭನ ದಕ್ಷತೆಯನ್ನು ತಳೆದರು. ದೇವನಾರಿಯರು ದೇವಪುಷ್ಪ ವರ್ಷವನ್ನು ಕರೆದರು. ಲಕ್ಷ್ಮೀ ಸ್ವಯಂವರದಲ್ಲಿ ಜಗತ್ತೇ ಸಂಭ್ರಮದಿಂದ ಪಾಲ್ಗೊಂಡಿತು.

ಮುತ್ತೈದೆಯರಿಗ ಶ್ರೀಹರಿಯನ್ನು ಹಸೆಗೆ ಕರೆಯುವ ಸಂಭ್ರಮ. ನವರತ್ನ ಮಂಟಪದಲ್ಲಿನ ಮತ್ತು ರತ್ನದ ಹಸೆಗೆ ಬಗೆಬಗೆಯಿಂದ ಕೃಷ್ಣನನ್ನು ಕರೆದರು. ಶೇಷಶಯನನೆ, ದೋಷದೂರನೆ, ವಿಲಾಸದಿಂದ ಹಸೆಗೆ ಬಾ, ಆದಿಕಾಲದಲ್ಲಿ ಆಲದೆಲೆಯ ಮೇಲೆ ಆದೇವಿಯೊಡನೆ ಪವಡಿಸಿದ ಕೃಷ್ಣಾ ಮೋದದಿಂದೆಮ್ಮ ಹಸೆಗೆ ಬಾ. ಬೊಮ್ಮನ ಮನೆಯಲ್ಲಿ ರನ್ನಪೀಠದಿ ಕುಳಿತು ನಿರ್ಮಲ ಪೂಜೆಯನ್ನು ಕೈಗೊಂಬ ನಾರಾಯಣನೆ, ಆ ನಾರಿಯೊಡನೆ ಹಸೆಗೇಳು, ನಿಮ್ಮ ನೆನೆವ ಮುನಿ ಹೃದಯದಲಿ ನೆಲೆಸಿದ ಧರ್ಮರಕ್ಷಕ, ನಿಸ್ಸೀಮ ಮಹಿಮ ಹಸೆಗೆ ಬಾ-ಎಂದು ಪರಿಪರಿಯಲ್ಲಿ ಕರೆಯಲು 'ನಗುತ ಬಂದು ಹಸೆಯ ಮೇಲೆ ವನಿತೆ ಲಕ್ಷುಮಿಯೊಡಗೂಡಿ ಆನಂತ ವೈಭವದಿ ಕುಳಿತ ಕೃಷ್ಣ'ನಿಗೆ ಮಹೋತ್ಸವ ಮಾಡಿದರು. ಅತ್ತೆಯರೆನಿಸುವ ಗಂಗೆ, ಯಮುನೆ, ಸರಸ್ವತಿ, ಭಾರತಿಯರು ಮುತ್ತಿನಕ್ಷತೆಯನ್ನು ಆರ್ತಿಯಿಂದ ಅಳಿಯನಿಗೆ ತಳೆದರು. ರತ್ನದಾರತಿಯ ಸುತ್ತ ಮುತ್ತನ್ನು ತುಂಬಿ ಮುತ್ತೈದೆಯರು ಆರತಿಯೆತ್ತಿದರು. ಆಗ ಬ್ರಹ್ಮ, ಈಶ್ವರ, ಅಗ್ನಿ, ಇಂದ್ರ ಮೊದಲಾದ ದೇವತೆಗಳು, ಪತ್ನಿಯರೊಡಗೂಡಿ ಬಂದು ಕಾಣಿಕೆಯಿತ್ತು ನಮಿಸಿದರು. 'ನಾಗನ ಮೇಲೆ ತಾ ಮಲಗಿದ್ದಾಗ ಆಗಲೆ ಜಗವ ಜತನದಿ ಧರಿಸೆಂದು' ನಾಗಬಲಿಯ ನಡೆಸಿದರು.

ನಂತರ ಮಗಳ ವಿವಾಹದುತ್ಸವಕ್ಕೆ ನೆರೆದಿದ್ದ ದೇವತೆಗಳಿಗೆಲ್ಲ ಸಮುದ್ರರಾಜ ಪರಿಪರಿಯ ಕಾಣಿಕೆಯಿತ್ತು ಉಪಚರಿಸಿದ ಕ್ಷುಧೆಯು ಕಳೆವ ನವರತ್ನಮಾಲೆ ಬ್ರಹ್ಮನಿಗೆ ಚಂದ್ರಕಲೆ ಈಶ್ವರನಿಗೆ, ಇಂದ್ರನಿಗೆ ಐರಾವತ, ಅಪ್ಸರ ಸ್ತ್ರೀಯರು, ಪಾರಿಜಾತ ವೃಕ್ಷಗಳನ್ನಿತ್ತ, ಉಳಿದ ದೇವತೆಗಳಿಗೆ ನವರತ್ನಗಳ ರಾಶಿರಾಶಿಗಳನ್ನು ಕೊಟ್ಟ ಅವರ ಮನೆಗಳಿಗೆ ಕಳುಹಿದ. ನವರತ್ನಮಯವಾದ ಅರಮನೆಯನ್ನು ತನ್ನ ಒಡಲಲ್ಲೆ ರಚಿಸಿ, ಮಗಳು ಅಳಿಯನಿಗಿತ್ತು, ತನ್ನ ಬಳಿಯಲ್ಲೆ ಇಟ್ಟು ಕೊಂಡ. ಪ್ರಿಯಳಾದ ಸತಿಗೆ ಜನ್ಮವಿತ್ತ ಕ್ಷೀರಸಾಗರದಲ್ಲೆ ಶ್ರೀಹರಿ ವಾಸವಾದ. ಇದು ಲಕ್ಷ್ಮೀಶೋಭಾನೆಯ ಕತೆ.

ಈ ಮಹಿಮಾನ್ವಿತವಾದ ಕೃತಿಯನ್ನು ಪಠಿಸಿದವರಿಗೆ ಆಯುಷ್ಯ, ಸಂಪತ್ತು ಸೌಭಾಗ್ಯಗಳು ದಿನದಿನಕ್ಕೆ ಹೆಚ್ಚುವುದು. ಅವರು ನಿರಾಯಾಸದಿಂದ ಸುಖಿಸುವರು. ಮದುವೆಯ ಮನೆಯಲ್ಲಿ ಈ ಹಾಡನ್ನು ಹಾಡಿದರೆ ಮದುಮಕ್ಕಳಿಗೆ ಶುಭವಾಗುವುದು. ಮದನನಯ್ಯನ ಕೃಪೆಯಿಂದ ಮದುಮಗಳಿಗೆ ಓಲೆಭಾಗ್ಯ ದಿನ ದಿನಕ್ಕೆ ಹೆಚ್ಚುವುದು. ಮೃತನಾದ ರಾಜಕುಮಾರನನ್ನೇ ಬದುಕಿಸಿದ ಮಹಿಮಾಪೂರ್ಣ ಹಾಡಲ್ಲವೆ ಇದು.

ಹೀಗೆ 'ಲಕ್ಷ್ಮೀ ಶೋಭಾನೆ'ಬಹು ಸುಂದರವಾದ ಕೃತಿ ಸರಳವಾದ ಭಾಷೆಯ, ರಾಗಭಾವ ಪೂರ್ಣವಾದ ಈ ಕೃತಿಯನ್ನು ಗೃಹಿಣಿಯರು ಪ್ರತಿನಿತ್ಯದಲ್ಲಿಯೂ ಮನೆಗಳಲ್ಲಿ ಹಾಡುತ್ತಿದ್ದರು. ಈಗಲೂ ಹಾಡುತ್ತಾರೆ. ಗೃಹಿಣಿಯರು ಬಲುಸುಲಭದಲ್ಲಿ ಇದನ್ನು ಕಲಿತು, ಶುಕ್ರವಾರ ಮುಂತಾದ ಲಕ್ಷ್ಮೀ ಪೂಜೆಯ ದಿನಗಳಲ್ಲಿ ಹಾಡಿದರೆ ಅವರಿಗೆ ಶ್ರೀ ಲಕ್ಷ್ಮೀನಾರಾಯಣರು ಸಕಲ ಸೌಭಾಗ್ಯಗಳನ್ನು ಕರುಣಿಸುವುದರಲ್ಲಿ ಸಂದೇಹವಿಲ್ಲ.

---

# ಹರಿಹರ ಕಂಡ ಮಹಾದೇವಿ

**ಶ್ರೀ ಕೆ. ರಮಾನಂದ**

'ಅಕ್ಕಮಹಾದೇವಿಯ ರಗಳೆ' ಹರಿಹರನ ಕಲಾಪ್ರೌಢಿಮೆಯ ಸಂಕ್ರಮಣಾವಸ್ಥೆಯ ಕೃತಿ. ಮಹಾದೇವಿ ಸಮಾಜವನ್ನು ಅಧಿಕರಿಸಿ ಬಂದವಳು. ಇಂತಹ ಸ್ವಾತಂತ್ರ್ಯದ ಪ್ರತೀಕವಾಗಿ ಹರಿಹರ ಚಿತ್ರಿಸಿರುವ ಮಹಾದೇವಿಯ ಕಥನ ರಮ್ಯೋಜ್ವಲ ಕಾವ್ಯವಾಗಿದೆ. ಹೀಗೆ ಅಕ್ಕಮಹಾದೇವಿಯ ಕಥೆಯನ್ನು ಸ್ವಾತಂತ್ರ್ಯದ ಜ್ವಲಂತರೂಪವಾಗಿ ಚಿತ್ರಿಸಿ ನೂತನ ಸಂಪ್ರದಾಯಕ್ಕೆ ಕಾಣಿಕೆಯಾಗಿ ನೀಡಿದ್ದಾನೆ ಹರಿಹರ.

'ಮಾಯೆಯೆಂಬ ಬಲೆಯಿಂದ ಶರಣರ ಬಿಡಿಸಿಕೊಂಡವರು' ಎಂಬ ಹೇಳಿಕೆ ಅಕ್ಕಮಹಾದೇವಿಗೆ ಅನ್ವಯಿಸುತ್ತದೆ. ಅಕ್ಕಮಹಾದೇವಿಯ ಸ್ತ್ರೀ ಸ್ವಾತಂತ್ರ್ಯದ ಪ್ರತೀಕವಾಗಿರುವ ಚಿತ್ರ ಬರುವುದು ಆಕೆಯ ವಿವಾಹ ಸಂದರ್ಭದಲ್ಲಿ. ವೈಹಾಳಿಗೆ ಹೊರಟಿದ್ದ ಕೌಶಿಕ ಮಹಾರಾಜ ಸುಂದರಿಯನ್ನು ದಾರಿಯಲ್ಲಿ ಗೃಹವೊಂದರ ಮುಂದೆ ಕಂಡು ವಿಸ್ಮಿತನಾದ ಒಂದೆರಡು ಕ್ಷಣ. ಕೌಶಿಕನ ಹೃದಯಂ ಪೋಪಂತೆ ಒಳಗೆ ಹೊರಟು ಹೋದಳು ಮಹಾದೇವಿ. ಹಗಲೂ ಇರುಳೂ ಈ ಸುಂದರಿಯದೇ ಧ್ಯಾನ ರಾಜನಿಗೆ. ಅವಳನ್ನೇ ನೆನೆದು ಹಂಬಲಿಸುವ ಕೌಶಿಕ ಆಕೆಯನ್ನು ವಿವಾಹವಾಗ ಬಯಸಿ ವಸಂತಕನನ್ನು ಕಳುಹಿಸುತ್ತಾನೆ. ವಸಂತಕ ಬಂದೇ ಬಂದ. ಮಹಾದೇವಿಯ ತಂದೆ ತಾಯಿಯರಲ್ಲಿ ಅವಳ ವಿವಾಹದ ಪ್ರಸ್ತಾಪ ಮಾಡಿದ. ವಸಂತಕನನ್ನು ಕಂಡ ಮಹಾದೇವಿ ನೇರವಾಗಿ ನುಡಿದಳು. 'ಸುಡು ಸುಡು ಭವಿಯಂ ವಿವಾಹವಾದಪರೆ ಬೆಳಗಿಂಗೆ ಕತ್ತಲೆಯ ಕೂಟ ಸರಿದೋರ್ಪುದೆ' ಎಂದು ಅವನನ್ನು ಹೀಯಾಳಿಸಿ ಕಳುಹಿಸಿದಳು: ಉಜ್ವಲ ನುಡಿ ಅವಳದು. ಬೆಳಕಿಗೆ ಕತ್ತಲೆಯ ಕೂಟ ಸರಿಹೊಂದುವುದೇ ? ಎಂದಿಗೂ ಇಲ್ಲ. ಬೆಳಕು ಎಂದಿಗೂ ಮತ್ತೊಂದು ಪರಂಜ್ಯೋತಿಯನ್ನು ಅರಸಿಕೊಂಡು ಹೋಗುತ್ತದೆ.

ಅರಸನಿಗೆ ವಿಚಾರ ತಿಳಿಯಿತು. ಕಾಮಾಂಧ ದೊರೆ. ಹೇಗಾದರೂ ಮಾಡಿ ಅವಳನ್ನು ಪಡೆಯಲೇ ಬೇಕೆಂದುಕೊಂಡ. ಅದಕ್ಕೆ ಪೂರಕವಾಗಿ ಅವನ ಬಳಿ ಸೈನ್ಯ ಅಧಿಕಾರ ಉಂಟಲ್ಲ. ಅರಸನು ಮಂತ್ರಿಗಳಿಗೆ ಹೇಳಿ ಕಳುಹಿಸಿದ. ಬಲ್ಪಿಂದ ಮೆಲ್ಪಿಂದ ಎಂತಾದೊಡಂ ಕರೆದಪ್ಪುದೆಂದಾಗ ಮಂತ್ರಿಗಳು ಅದೇ ಅಹಂಕಾರದಿಂದ ಮಹಾದೇವಿಯ ಮನೆಗೆ ಬಂದರು: ರಾಜನ ಸಂದೇಶ ತಿಳಿಸಿದರು. ಮಹಾದೇವಿಯ ತನ್ನ ತಂದೆ – ತಾಯಿಗಳಿಗೆ ಒದಗಿದ ಅಸಹಾಯಸ್ಥಿತಿಯನ್ನು ನೋಡುತ್ತಾಳೆ.

ರಾಜನ ಆಜ್ಞೆ ಹೀಗಿದೆ..........."ಕೂಸಂ ಕೊಟ್ಟೊಡೆ ಸಕಲ ಸುಖಸಂಪದಂ, ಕೊಡದಿರ್ದೊಡೆ ಕೊಲಿಸುವೆಂ". ಆಗ ಆಕೆಯ ತಂದೆ–ತಾಯಿಗಳು ಭವಿಗಳನ್ನು ವಿವಾಹವಾಗಿ ಉದ್ಧಾರ ಹೊಂದಿದ, ಭವಿಗಳೊಡನೆಯೇ ಬಾಳಿದ, ಶಿವ ಶರಣೆಯರಾದ ವೈಜಕವ್ವೆ, ಮಲುಹಣೆ, ಪಾಂಡ್ಯಕ್ಕರಸಿ, ಕೋಳೂರು ಕೊಡಗೂಸು ಇವರ ಉದಾಹರಣೆಗಳನ್ನು ಕೊಡುತ್ತಾರೆ.

ಅಕ್ಕ, ಮುದಿಯಾದ ತಂದೆ–ತಾಯಿಗಳ ಮನಸ್ಸು ನೋಯಿಸದೆ ರಾಜ್ಯದ ಕೋಶವೆಲ್ಲಾ ತನ್ನದಾಗಿ, ತನ್ನ ಲಿಂಗ–ಗುರು–ಜಂಗಮ ಪೂಜೆಗೆ ಎಂದೂ ವಿರೋಧ ಬಾರದಂತೆ ಇದ್ದರೆ ಮಾತ್ರ ರಾಜನನ್ನು ವಿವಾಹವಾಗುತ್ತೇನೆ ಎಂಬ ಶರತ್ತುಗಳನ್ನು ಒಡ್ಡುತ್ತಾಳೆ. ಸ್ತ್ರೀ ಸ್ವಾತಂತ್ರ್ಯದ ಸೂಕ್ಷ್ಮ ಸುಳುಹು ಈ ಪ್ರಸಂಗದಲ್ಲಿದೆ. ಏಕೆಂದರೆ ಮೊಟ್ಟ ಮೊದಲು ತನ್ನನ್ನು ದುರ್ಬಲಗೊಳಿಸಿದ ಸಮಾಜಕ್ಕೆ ಪೆಟ್ಟು ಕೊಡುವಂತೆ ರಾಜ್ಯ–ಕೋಶ ಎಲ್ಲವನ್ನೂ ತನ್ನ ವಿವಾಹದ ಕಾರಣದಿಂದ ಅಕ್ಕ ಸಾಧಿಸಿ ಕೊಳ್ಳುತ್ತಾಳೆ. ನಂತರವಾದರೂ ತನ್ನ ನಿಬಂಧನೆಗಳಿಂದ ಕೌಶಿಕ ಶಿವಭಕ್ತನಾಗಿ ಪರಿವರ್ತಿತನಾಗಬಹುದೆಂಬ ಭ್ರಮೆ ಅಕ್ಕನಿಗೆ ಆದರೆ. ಈ ಭ್ರಮೆ ಬಹಳ ಕಾಲ ಉಳಿಯಲಿಲ್ಲ. ಎಲ್ಲವೂ ಮಂಜಿನಂತೆ ಕರಗಿ ಹೋಯಿತು. ವಿವಾಹದ ಸಮಯದಲ್ಲಿ ಅಕ್ಕನ ಮನಸ್ಸಿನ ತಳಮಳ ವಿವಾಹವಾಗದಿರಲಿ ಎಂದೇ ಇದೆ. "ಜವನಿಕೆ ಆದಷ್ಟು ಬೇಗ ಸರಿಯಲಿ" ಎಂದು ಕೌಶಿಕ ಇಚ್ಛಿಸಿದರೆ "ಜವನಿಕೆ ಸರಿಯದೆ ತಾನು, ವಿವಾಹವಾಗದೆ ವಿವಾಹ ನಿಂತು ಹೋದರೆ ಸಾಕೆನ್ನುವ ಮಹಾದೇವಿ. ಇವರಿಬ್ಬರ ವೈರುಧ್ಯದ ಚಿತ್ರಣವನ್ನು ಹರಿಹರ ಸುಂದರವಾಗಿ ನಿರೂಪಿಸಿದ್ದಾನೆ. ಹರಿಹರನ ಕಥನ ಕೌಶಲ ಚಿತ್ರಣದ ಪಕ್ಷಿ ಇಲ್ಲಿ ಗರಿಗೆದರಿ ಹಾಕಿದೆ. ಒಂದು ಕಡೆ ಅತಿ ಕಾಮಿ, ಕೋಪಿ, ನಿಷ್ಠುರಿಯಾದ ಕೌಶಿಕ–ಲೌಕಿಕ ಪ್ರೇಮದ ಸಂಕೇತವಾಗಿ ತನ್ನ ಬಲವನ್ನು ಜನಗಳ ಮೇಲೆ ಪ್ರದರ್ಶಿಸಲಿಚ್ಛಿಸುವ ಸಂಕೇತವಾಗಿದ್ದರೆ, ರಾಜನ ಆಡಳಿತಕ್ಕೆ ಒಪ್ಪದೆ ಅವನ ವಶವರ್ತಿಯಾಗದೆ ಇರುವ ಹಂಬಲ ದಿಂದ ಅಲೌಕಿಕ ಪ್ರೇಮದ ಪ್ರತೀಕವಾಗಿ ಅಕ್ಕಮಹಾದೇವಿಯಿದ್ದಾಳೆ. ರಾಜನ ಬಲಾತ್ಕಾರದ ಚಿತ್ರಣವನ್ನು ನಿರೂಪಿಸಿದ ಹರಿಹರ ಅಕ್ಕನನ್ನು ಮೊಟ್ಟಮೊದಲ ಸ್ವಾತಂತ್ರ್ಯಪ್ರೇಮಿ ಸ್ತ್ರೀಯನ್ನಾಗಿ ಕಡೆದು ನಿಲ್ಲಿಸಿದ್ದಾನೆ.

ಅಕ್ಕನ ಶರತ್ತುಗಳನ್ನು ಬಹುಬೇಗ ಮುರಿದ ಕಾಮಿ ಕೌಶಿಕ ರಾಜ. ಅವನು ಮಹಾದೇವಿಯನ್ನು ಒಲಿಸಿ ಕೊಳ್ಳುವ ಪ್ರಯತ್ನವೆಲ್ಲಾ ವಿಫಲವಾಯಿತು ಮಹಾದೇವಿ ತನ್ನಿಚ್ಛೆಯಂತೆ ಸ್ವತಂತ್ರವಾಗಿ ಶಿವ ಪೂಜೆ ಮಾಡ ತೊಡಗಿದಳು. ಅವಳ ಶರತ್ತು ಅದೇ ತಾನೆ. ಬಾಣಸಿಗ ಮಂಡಿಗೆಯ ಎಸಳುಗಳನ್ನು ಒಂದೊಂದಾಗಿ ಬಿಡಿಸಿಕೊಡುವಂತೆ

ಕನ್ನಡ ಸಾಹಿತ್ಯದಲ್ಲಿ ಹರಿಹರನ ಹೆಸರು ಕ್ರಾಂತಿಯೊಡನೆ ಸಮಾನಾರ್ಥವಾದುದು. ಅವನಿಗೆ ಹಲವರು ಹಿಡಿದ ಹಾದಿ ಹಸನಲ್ಲ. ತನ್ನದೇ ಒಂದು ರಗಳೆಯನ್ನು ಉಂಟು ಮಾಡಿಕೊಂಡು ಹೊಸದಿಕ್ಕಿನಲ್ಲಿ ಹೊರಡುವ ಅದಮ್ಯ ಉತ್ಸಾಹದ ಸೃಜನಶೀಲ ಕವಿ ಆತ. ಕನ್ನಡಕ್ಕೆ ಆತ ನೀಡಿದ ಐತಿಹಾಸಿಕ ವ್ಯಕ್ತಿಗಳ ಕಥೆಗಳೂ ಅಲ್ಲಿನ ಪಾತ್ರಗಳು ಐತಿಹಾಸಿಕವಾದಂತೆಯೇ ಕ್ರಾಂತಿಕಾರಿ ಮನೋಭೂಮಿಕೆಯವೂ ಹೌದು. ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ, ಒಂದೇ ಎರಡೇ–ಎಲ್ಲರೂ ಕನ್ನಡದ ನಾಡಿನಲ್ಲಿ, ನುಡಿಯಲ್ಲಿ, ನಡೆಯಲ್ಲಿ, ಧರ್ಮ ಸಾಹಿತ್ಯ, ಶಿಸ್ತುಗಳಲ್ಲಿ ಹೊಸತನವನ್ನೂ ಮೂಡಿಸಿದವರೇ. ಅಂತಹವರಲ್ಲಿ ಅಕ್ಕಮಹಾದೇವಿಯೂ ಒಬ್ಬಳು. ಪ್ರಾತಃ ಸ್ಮರಣೀಯಳಾದ ಈ ಭಕ್ತೆಯ ಕಥೆಯನ್ನು ಹೇಳಿದರೆ ಹರಿಹರನೇ ಹೇಳಬೇಕು ಎಂಬಂತಿದೆ. ಅದರ ಒಂದು ಪರಿಚಯ ಈ ಲೇಖನ—ಸಂ॥

ಹರಿಹರ ಪೂಜೆಯ ಎಲ್ಲಾವಿವರಗಳನ್ನೂ ಸೂಕ್ಷ್ಮ ವರ್ಣನೆಯನ್ನೂ ನೀಡುತ್ತಾನೆ.

ಈ ಪದಪ್ರಯೋಗದ ವೈಶಿಷ್ಟ್ಯ ಹೃದಯಂಗಮವಾಗಿದೆ.

"ಬಾರ ಫಳವೆ ಬಾರ ಫಳದ ರಸವೆ ಬಾರ
ರಸದ ಸವಿಯೆ ಬಾರ ಸವಿಯ ಸೊಲ್ಲೆ ಬಾರ
ಗುಣದ ಮಣಿಯೆ ಬಾರ ಮಣಿಯ ಖಣಿಯೆ

ಎಂದು ಪ್ರಾರ್ಥಿಸಿದ ಅಕ್ಕ ಈಶ್ವರ ಪೂಜೆ ಮಾಡುತ್ತಾಳೆ.

ಅಕ್ಕ ಎಷ್ಟು ಈಶ್ವರ ಪ್ರಿಯಳೆಂದರೆ ಆಕೆ ಪರಿಮಳದುದಕದಲ್ಲಿ ಸ್ನಾನಮಾಡಿ ಈಶ್ವರಪೂಜೆ ಮಾಡುತ್ತಿದ್ದಾಗ ಯಾರೂ ಆಕೆಯನ್ನು ಮುಟ್ಟಬಾರದು.

ಕೌಶಿಕ ಒಮ್ಮೆ ವೈಹಾಳಿಗೆ ಹೋಗಿದ್ದಾಗ ಇತನ ಬರವಿಲ್ಲದೆ ಜಂಗಮರಿಗೆ ಹೊನ್ನುಗಳನ್ನು ನೀಡಲಾಗದೆಂದು ಹೇಳಿದ ಭಂಡಾರಿಯ ಮಾತಿಗೆ ಬೇಸತ್ತು ತನ್ನ ಮೈಮೇಲಿನ ಒಡವೆಗಳನ್ನೇ ದಾನ ಮಾಡುತ್ತಾಳೆ ಅಕ್ಕ. ಇಲ್ಲಿನ ಅವಳ ಸ್ವತಂತ್ರ ಮನೋವೃತ್ತಿಯನ್ನು ಗಮನಿಸಬೇಕು. ಸುರತ ಸಮಯ ರಾಜನಿಗೆ ಬಹಳ ಪ್ರಿಯ, ಆದರೆ ಆಗಲೂ ಮಹಾದೇವಿ 'ಸುಡುಸುಡುಭವಿಯ' ಎಂದು ನಿಂದಿಸುತ್ತಾಳೆ. ಭವಿಯ ಸಂಗ ತನಗೆ ಬಲವಂತವಾದಾಗ ನೋಯುತ್ತಾಳೆ "ಬೆಳಗಪ್ಪದಂ ಮಹಾದೇವಿ ಬಯಸುತ್ತಿರೆ ಕೌಶಿಕಂ ಬಯಸದಿರೆ" ಅಕ್ಕನು "ಈ ಭವಿಯ ಕೂಟಂವಿಷಯ ಸಂಯೋಗದಂತಿರಲು" ಕಾಲ ನೂಕುತ್ತಾಳೆ. ಇಲ್ಲೇ ಒಂದು ಪ್ರಸಂಗ ಬಹಳ ರಸವತ್ತಾಗಿದೆ. ಒಮ್ಮೆರಾಜ ಅವಳೊಡನೆ ಕ್ರೀಡಿಸಿದ್ದಾನೆ. ಆಗ ಮಾಯಾ ಜಂಗಮರು ಬಂದರು. ಮಹಾದೇವಿ ತಾನಿದ್ದ ಸ್ಥಿತಿಯನ್ನು ನೆನೆಯದೆ ಒಂದೇ ಮನದಿಂದ ಜಂಗಮರಿಗೆ ವಂದಿಸುತ್ತಾಳೆ. ಜಂಗಮ ಗುರುಗಳು ತಾನು ಹುಟ್ಟಿ ಬಂದ ಸ್ಥಿತಿಯಲ್ಲೇ ಮಹಾದೇವಿ ನಮಸ್ಕರಿಸುವುದನ್ನು ಕಂಡು "...ದುಕೂಲಮಂ ಬಾಸಣಿಸಿಕೊಳ್ ಮಗಳೆ..." ಎನ್ನುತ್ತಾರೆ. ಇದರಿಂದ ಕೌಶಿಕನಿಗೆ ತುಂಬಾ ನಾಚಿಕೆಯಾಗುತ್ತದೆ. ಮಹಾದೇವಿ ಸೀರೆಗಾಗಿ ಕೈ ಚಾಚಿದಾಗ ಕೌಶಿಕ ನಾಚಿಕೆ – ಕೋಪಗಳಿಂದ "...ಮೀಂದವಳ್ಗೆ ಸೀರೆಯೇಕೆಂದು ಸೀರೆ ಕಸಿದುಕೊಳ್ಳುತ್ತಾನೆ. ಸಪೂರ ವಸ್ತ್ರ ರಾಜನ ಬಳಿ, ಮಹಾದೇವಿ ನಗ್ನತೆಯ ಸಾಕಾರ ಮೂರ್ತಿಯಾದಳು. ಸೀರೆಯೇನು? ಎಲ್ಲ ಐಹಿಕ ಬಂಧನಗಳೂ ಕಡಿದು ಬೀಳುತ್ತವೆ. ಅಚ್ಚ ಭಕುತಿಯ ಸುಖ ಸಿಲುಕುವುದಕೆ ದಾರಿಯಾಗಿ–ಭವಿಯ ಸಂಗವೆಂದು ಮಾಣ್ಬೆದೆಂದು ಹಗಲಿರುಳು ಹಂಬಲಿಸಿದ ಮಹಾದೇವಿಗೆ ಆ ಹಂಬಲ ಕೈಗೂಡುತ್ತದೆ, ನಿಲುವು ಸತ್ಯವಾಗುತ್ತದೆ. ತಂದೆ–ತಾಯಿ–ಬಂಧು–ಬಳಗ–ರಾಜ್ಯ–ರಾಜ್ಯ – ಪರಿವಾರ – ಎಲ್ಲವನ್ನೂ ಕೊನೆಗೆ ಮೈಮೇಲಿನ ವಸ್ತ್ರಗಳನ್ನೂ ತ್ಯಜಿಸಿ ಸ್ವತಂತ್ರ ಸ್ತ್ರೀಯಾಗಿ ಯಾರ ಹಂಗೂ ಇಲ್ಲದೆ ಶ್ರೀಪರ್ವತಕ್ಕೆ ಬರುತ್ತಾಳೆ.

ಮುಂದಿನ ಘಟ್ಟ ಅವಳ ಕಠಿಣತಮವಾದ ಕಾಯನಿಷ್ಠೆಯನ್ನು ಬಿಂಬಿಸುವ ಭಾಗವಾಗಿದೆ.

'ಎಲ್ಲಿ ಲತೆಗಳುಂಟಲ್ಲಲ್ಲಿ ಮಹಾದೇವಿ, ಎಲ್ಲಿ ಗುಹೆಗಳು ಅಲ್ಲಿ ಮಲ್ಲಿನಾಥನ ಪೂಜೆ'. ಮಲ್ಲಿನಾಥನ ದರ್ಶನವೇ ಈಗ ಅವಳ ಮುಖ್ಯಧ್ಯೇಯವಾಗಿದೆ. ಮಹಾದೇವಿ ದೂರವಾದಳು, ಆದರೆ ವಿರಹಿ ರಾಜ ಅಷ್ಟು ಸುಲಭದಲ್ಲಿ ಮರೆಯುವನೇ? ಅವಳನ್ನು ಅವಳು ಪೂಜೆ ಮಾಡುತ್ತಿದ್ದ ಜಾಗವನ್ನು ಅರಿತುಕೊಳ್ಳುತ್ತಾನೆ. ಆಕೆಯ ಕನಸನ್ನೆ ಕಾಣುತ್ತಿದ್ದ ಕೌಶಿಕ ತನ್ನ ಹಲವು ಸಂಗಡಿಗರೊಡನೆ ಜಂಗಮರಂತೆ ವೇಷಧರಿಸಿ ಅಕ್ಕನಲ್ಲಿಗೆ ಬರುತ್ತಾನೆ. ಅಕ್ಕ ಇದನ್ನು ಕಂಡು ಮನದಲ್ಲೇ ನೊಯುತ್ತಾಳೆ. ಇದೇನು ಮಾಯೆ ತನ್ನನ್ನು ಹೀಗೆ ಕಾಡಿಸುತ್ತಿದೆ?

"ಬಿಟ್ಟೆನೆಂದರೂ ಬಿಡದಪ್ಪುದೀ ಮಾಯೆ" ಎಂಬ ಇಲ್ಲಿನ ಹರಿಹರನ ಮಾತು ಅಕ್ಕನ ವಚನವಾದ "ಕಾಮುಕ್ಕೆ ಮರುಳಾಗಿ ಕಾಡಿತ್ತು ಮಾಯೆ. ಸಕಲ ಜಂಗುಳಿಗಳಲ್ಲಿಯೂ ಬೆಂಗೋಲ ನೆತ್ತಿ ಕಾಡಿತ್ತು ಮಾಯೆ. ಚೆನ್ನ ಮಲ್ಲಿಕಾರ್ಜುನ ನೀ ಒಲಿದ ಮಾಯೆಯನು ಆರೂ ಗೆಲಲಾರರು..." ಎಂಬುದರ ಪ್ರಭಾವದಿಂದ ಮೂಡಿ ಬಂದಿದೆ ಈ ಮಾಯೆ ಸ್ತ್ರೀ ಪುರುಷರಿಬ್ಬರನ್ನೂ ಕಾಡಿಸಿದೆ. ಸ್ತ್ರೀಯಮುಂದೆ ಪುರುಷನೆಂಬ ಅಭಿಮಾನವಾಗಿ, ಪುರುಷನ ಮುಂದೆ ಸ್ತ್ರೀಯೆಂಬ ರೂಪದಿಂದ ಕಾಡುವ ಈ ಮಾಯೆ ಯಾರನ್ನೂ ಬಿಡಲೊಲ್ಲದು. ಇನ್ನು ಮಹಾದೇವಿಯ ವಿಚಿತ್ರ ಮನೋಭಾವನೆಯನ್ನು ಅರಿತ ಕೊಳ್ಳಲಾಗದ ಮೂಢ ಕೌಶಿಕನ ಪಾಡೇನು?–ಹರಿಹರನಿಗೆ ಅಕ್ಕನ ವಚನಗಳ ಪೂರ್ಣ ಅರಿವಿರುವುದು ಗೋಚರಿಸುತ್ತದೆ. ಮುಂದೆ ಮಹಾದೇವಿ ತನ್ನ ತಂದೆ–ತಾಯಿಗಳೆಂಬ ಮಮತೆಯನ್ನೇ ದಾಟುತ್ತಾಳೆ. ಹೀಗೆ ಕುಟುಂಬ, ಸಮಾಜ, ರೀತಿ, ರಿವಾಜುಗಳನ್ನು ಧಿಕ್ಕರಿಸಿ ಅಕ್ಕ ಮಹಾದೇವಿ ಸ್ವಾತಂತ್ರ್ಯದ ಪ್ರತೀಕವೇ ಎನಿಸಿದ್ದಾಳೆ. ಆದರೆ ಆಕೆಯಲ್ಲಿ ಕಂಡುಬರುವ ಈ ಕ್ರಾಂತಿಕಾರಕ ಮನೋಭಾವ, ಸಮಾಜದಲ್ಲಿ ಸ್ತ್ರೀ ಪುರುಷನ ಕೀಲು ಕೊಟ್ಟ ಬೊಂಬೆಯಲ್ಲ ಆಕೆಗೂ ಸ್ವತಂತ್ರವಾದ ಅಸ್ತಿತ್ವವಿದೆ ಎಂಬುದನ್ನು ನಿರೂಪಿಸುತ್ತದೆ. ಎಲ್ಲಾ ದೃಷ್ಟಿಯಿಂದಲೂ ಸಮಾಜವನ್ನು ಧಿಕ್ಕರಿಸಿದ ಅಕ್ಕ ಮಹಾದೇವಿಯನ್ನು ಉಜ್ವಲ ಸ್ವಾತಂತ್ರ್ಯದ ಪ್ರತೀಕವಾಗಿ ಚಿತ್ರಿಸಿದ ಮಹಾಕವಿ ಹರಿಹರ ಅಕ್ಕಮಹಾದೇವಿಯರಗಳೆ ಕಾವ್ಯದಲ್ಲಿ ತನ್ನ ಎಲ್ಲಾ ಸತ್ವವನ್ನೂ ಮೆರೆದಿದ್ದಾನೆ.

(10ನೇ ಪುಟದಿಂದ )

ಇಂದಿರನೋಡು ಬ್ರಮ ನೀಶನಿಮ್ಮೈ
ಯವರೆಲ್ಲಾಂ
ಮಂದಿರ ಮಾಮಲರ್ ಕೊಂಡು
ಮಱೈಂದುವವರಾಯ್
ವಂದು ನಿನ್ರಾರ್ ಶಂದಿರನ್ ಮಾಳಿಹೈ ಶೇರುಂ
ಚತುರರ್‌ಹಳ್ ವೆಳ್ಳರ್ಕೈ ನಿನ್ರಾಯ್
ಅಂದಿಯುಂ ಪೋದಿದುವಾಹುಮಳಹನೇ
ಕಾಪ್ಪಿಡ ವಾರಾಯ್

ಇಂದ್ರನೊಡನೆ ಈಶ್ವರ ಬ್ರಹ್ಮಾದಿ ದೇವತೆಗಳು ಮಂತ್ರ ಪುಷ್ಪಗಳೊಡನೆ ಬಂದು ನಿಂತಿದ್ದಾರೆ. ಚಂದ್ರನು ಮಾಳಿಗೆಯನ್ನು ಸೇರಲು ಶ್ವೇತಗಿರಿಯಲ್ಲಿ ನಿಂತ. ಚತುರನೇ ಸಂಜೆಯು ಹೊತ್ತಾಯಿತು, ಚಲುವ ನಾರಾಯಣಾ ರಕ್ಷಿಸುನ್ನಿಡುವೆ ಬಾರಯ್ಯ – ಎಂಬುವುದಾಗಿ ಕರೆಯುತ್ತಾರೆ.

ಸಪ್ತಗಿರಿವಾಸನನ್ನು ತಿರುವೇಂಗಡದೊಡೆಯನನ್ನು ಕುರಿತು ಪರಬ್ರಹ್ಮನಿಗೆ ಸೇರಿದ ಚೇತನಾತ್ಮಕವಾದ ಸ್ವತ್ತು ತಾನೆಂದು ಆತನ ಕೈಂಕರ್ಯವೇ ತನ್ನ ಜೀವನದ ಗುರಿಯೆಂದೂ ಹಂಬಲಿಸುವ ಶೆನ್ನಿಯೊಂಗು ಎಂಬುವ ಆರ್ತನಾದಲಹರಿ ಇಂತಿದೆ.

ಶೆನ್ನಿಯೋಂಗು ತಣ್ ತಿರುವೇಂಗಡ
ಮುಡೈಯಾಯ್ ಉಲಹು
ತನ್ನೈವಾಳ ನಿನ್ರ ನಂಬೀ ದಾಮೋದರಾ!
ಶದಿರಾ!
ಎನ್ನೈಯುಂ ಎನ್ನುಡೆಮೈಯುಮುನ್‌ಶಕ್ಕರ
ಪ್ಪೊರಿ ಯೊತ್ರಿಕ್ಕೊಂಡು
ನಿನ್ನರುಳೇ ಪುರಿಂದಿರುಂದೇನಿನಿಯೆನ್
ತಿರುಕ್ಕುರಿಪ್ಪೋ

ತಂಪಾದ ಉನ್ನತ ಶಿಖರಗಳಿರುವ ತಿರುವೇಂಗಡದೊಡಯಾ, ಲೋಕಪಾಲಕನಾಗಿ ನಿಂತ ನಂಬೀ, ಚತುರ ದಾಮೋದರಾ, ನನಗೂ ನನ್ನೊಡವೆಗೂ ನಿನ್ನ ಸಮಾಶ್ರಣ ಹೊಂದಿರಲು ನಿನ್ನನ್ನೇ ಬಯಸುವೆನು. ನಿನ್ನ ಆಸೆ ಬೇರೆ ಏನಾದರೂ ಇದೆಯೇ, ನನ್ನರಸನೇ ನನ್ನ ಕುಲದೈವವೇ ನನ್ನ ನಾಯಕನೇ, ನಿನ್ನನ್ನು ಪಡೆದ ಭಾಗ್ಯ ಬಲು ಮಿಗಿಲಾದದು – ಎಂಬುವುದಾಗಿ ನಾಯಕೀ ಭಾವದಲ್ಲಿ ಶ್ರೀನಿವಾಸನನ್ನು ಕರೆಯುತ್ತಾರೆ.

ನಿನ್ನ ಲೀಲೆಗಳನ್ನು ಒಂದೂ ಬಾಕಿಯಿಲ್ಲದೆ ಎಲ್ಲವನ್ನೂ ನನ್ನ ಮನದ ಭಿತ್ತಿಯಲ್ಲಿ ಬರೆದುಕೊಂಡಿರುವೆ. ಕ್ಷತ್ರಿಯ ಕುಠಾರನಾದ ಪರಶುರಾಮ ನನ್ನಬಳಿ ಬಾರಯ್ಯ. ನನ್ನ ಬಾಳಿನ ಬುತ್ತಿಯೇ ನೀನೆಲ್ಲಿಗೆ ಹೋಗಿರುವೆ ಎಂಬುವುದಾಗಿ ಪರಮಾತ್ಮನನ್ನು ಮತ್ತೊಂದು ಪಾಶುರದಲ್ಲಿ ಹಾಡಿದ್ದಾರೆ ತಮ್ಮ ಕೈಂಕರ್ಯ ಬಗ್ಗೆ "ವೇಯರ್ ತಂಗಳ್ ಕುಲತ್ತುದಿತ್ತ ಪಿಟ್ಟು ಶಿತ್ತನ್ ಮನತ್ತೇ ಕೋಯಿಲ್ ಕೊಂಡ ಕೋವಲನ್ನೈ ಕ್ಕೊಳುಂ ಕುಳಿರ್ ಮುಗಿಲ್ವಣ್ಣನ್ನೈ ಆಯರೇತ್ತೈಯ ಮಮರ್ ಕೊವೈಯಂದಣರ್ ತಮ ಮುದತ್ತಿನ್ನೈ ಚ್ಚಾಯ್ಪ್ಪೋಲ ಪ್ಪಾಡವಲ್ಲಾರ್ ತಾಮು ಮಣುಕ್ಕರ್ ಹಳೇ"

ಎಂಬುವುದಾಗಿ ಹಾಡುವಾಗ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದ ವಿಷ್ಣುಚಿತ್ತರ ಮನದಲ್ಲಿ ನೆಲೆಗೊಂಡ ಗೋಪಾಲನು ಅಂದವಾದ ಶ್ಯಾಮ ಸುಂದರನು, ಅಮರ ಪತಿ ಲೋಕರಕ್ಷಕನು ಎಂಬುವುದಾಗಿ ತಿಳಿಸಿದ್ದಾರೆ. ವಿಷ್ಣು ಚಿತ್ತರ ಈ ವಾತ್ಸಲ್ಯ ಭಕ್ತಿಯನ್ನು ನೋಡಿ ಭೂದೇವಿಯು ಇವರ ಮಧ್ಯೆ ಬೆಳೆಯಲು ನಿಶ್ಚಯಿಸಿದಳು. ಒಂದು ದಿನ ಪೆರಿಯಾಳ್ವಾರರು ತುಲಸಿಯ ತೋಟದಲ್ಲಿ ಸಂಚರಿಸುತ್ತಿರುವಾಗ ಅಲ್ಲಿ ಅವರಿಗೆ ಭೂದೇವಿ ಅಂಶಭೂತಳಾದ ಹೆಣ್ಣು ಮಗವು ಗೋಚರಿಸಿತು. ಜನಕರಾಜನಿಗೆ ಸೀತೆಯು ಸಿಕ್ಕಿದ ಹಾಗೆ ಶ್ರೀವಿಷ್ಣು ಚಿತ್ತರಿಗೆ ಸಿಕ್ಕಿದ ಆ ಮಗುವಿಗೆ ಗೋದಾ ಎಂಬುವುದಾಗಿ ಕರೆದರು ಅವಳಿಗೆ ಆಂಡಾಳೆಂಬ ಹೆಸರಿನಿಂದಲೂ ಕೂಗುತ್ತಿದ್ದರು. ಅವಳಿಗೆ ಎಳೆತನದಿಂದಲೂ ಕೃಷ್ಣನ ಮೇಲೆ ಪ್ರೀತಿ, ಕೃಷ್ಣನ ನಾಮಸ್ಮರಣೆ, ಅವನ ಚರಿತೆಗಳನ್ನು ಕೇಳುವುದು, ಆನಂದ ಪಡುವುದೇ ಅವಳ ನಿತ್ಯವಾಡಿಕೆಯಾಯಿತು. ಅವಳ ಭಗವದ್ಭಕ್ತಿಗೆ ಪೂರಕವಾಗುವಂತೆ ಶ್ರೀವಿಷ್ಣುಚಿತ್ತರು ಎಲ್ಲಾದಿವ್ಯ ದೇಶಗಳ ದೇವರ ಮಹಿಮೆಯನ್ನು ಹೇಳುತ್ತಿರಲು ಗೋದೆಯು ಶ್ರೀರಂಗದ ರಂಗನಾಥನು ಬಹುವಾಗಿ ಮೆಚ್ಚಿದಳು. ಪೆರಿಯಾಳ್ವಾರರ ಜೊತೆಯಲ್ಲಿ ದಿನವೂ ಹೂಗಳನ್ನೂ ಕೀಳುವುದು ಅವುಗಳನ್ನು ಮಾಲೆ ಕಟ್ಟುವುದು ವಟಪತ್ರಶಾಯಿಗೆ ಸಮರ್ಪಿಸುವುದು ಇವರ ನಿತ್ಯ ಕೈಂಕರ್ಯವಾಗಿತ್ತು ಆಂಡಾಳಿಗೆ ಹೂವುಗಳೆಂದರೆ ಬಲು ಪ್ರೀತಿ. ತಂದೆ ಹೂವುಗಳನ್ನು ಕಟ್ಟಿ ಸ್ನಾನಕ್ಕೆ ಹೋದಾಗ ಆ ಹೂವಿನ ದಂಡೆಯನ್ನು ಮುಡಿದು ಕನ್ನಡಿಯಲ್ಲಿ ತನ್ನ ಸೌಂದರ್ಯವನ್ನು ನೋಡಿ ತೃಪ್ತಿಗೊಂಡು ತರುವಾಯ ಆ ಹೂವನ್ನು ದೇವರಿಗೆ ಕಳುಹಿಸುತ್ತಿದ್ದಳು. ಹೀಗೆ ಬಹುಕಾಲ ನಡೆದು ಬಂತು. ಒಂದು ದಿನ ವಿಷ್ಣು ಚಿತ್ತರು ಮಗಳ ಅಪಚಾರ ಕಣ್ಣಾರೆ ಕಂಡರು. ಮಗಳಿಗೆ ಬುದ್ಧಿ ಹೇಳಿ ದೇವರಿಗೆ ಆದಿನ ಮಾಲೆಯನ್ನು ಅರ್ಪಿಸಿದೆ ಬಹಳ ವ್ಯಾಕುಲ ಚಿತ್ತರಾಗಿ ಮನೆಯಲ್ಲೇ ಇದ್ದರು. ಆದಿನ ರಾತ್ರಿ ವಟಪತ್ರ ಶಾಯಿ ಕನಸಿನಲ್ಲಿ ಕಾಣಿಸಿಕೊಂಡು 'ವಿಷ್ಣುಚಿತ್ತರೇ ನಿಮ್ಮ ಮಗಳಾದ ಆಂಡಾಳ್ ನನ್ನ ಭೂದೇವಿಯ ಅಂಶ. ಅವಳು ಮುಡಿದ ಹೂವೇ ನನಗೆ ಪ್ರಿಯವು. ಇನ್ನು ಮುಂದೆ ಅವಳ ಮುಡಿದ ಹೂವನ್ನೇ ನನಗೆ ಅರ್ಪಿಸಿ' ಎಂದು ಹೇಳಿ ಅಂತರ್ಧಾನನಾದನು.

ಆ ದಿನದಿಂದ ಪರಮಾತ್ಮನು ಹೇಳಿದಂತೆ ವಿಷ್ಣುಚಿತ್ತರು ನಡೆದು ಕೊಳ್ಳುತ್ತಿದ್ದರು. ಗೋದೆಗೆ ಮದುವೆಯ ವಯಸ್ಸಾಯಿತು. ಅವಳಿಗೆ ಶ್ರೀರಂಗನಾಥನಲ್ಲಿ ಅಪಾರವಾದ ಪ್ರೇಮವು ಉಂಟಾಯಿತು. ಆತನಲ್ಲಿ ಹುಟ್ಟಿದ ಪ್ರೇಮ ವಿರಹಕ್ಕೆ ತಿರುಗಿತು. ತಂದೆಯ ಮಾತಿನಂತೆ ಗೋಪಿಯರು ಕೈಗೊಂಡ ಕಾತ್ಯಾಯನೀ ವ್ರತದಂತೆ ಭಗವಂತನನ್ನು ಪಡೆಯಲು ಮಾರ್ಗಶಿರಮಾಸದಲ್ಲಿ ನೋಂಪಿಯನ್ನು ಕೈಗೊಂಡು ಭಗವತ್ಪ್ರೇಮದಿಂದ ಹಾಡಿದಳು, ತಿರುಪ್ಪಾವೈ ಎಂಬುವ ಮೂವತ್ತು ಪಾಶುರಗಳನ್ನು. ಮಗಳ ಇಚ್ಛೆಯಂತೆ ತಂದೆ ಶ್ರೀರಂಗಯಾತ್ರೆಯನ್ನು ಕೈಗೊಂಡರು. ಮಗಳನ್ನು ವಧುವಾಗಿ ಸಿಂಗರಿಸಿ ಪಾಂಡ್ಯರಾಜನ ನೆರವಿನಿಂದ ಸಕಲ ರಾಜ ಮರ್ಯಾದೆಗಳನ್ನು ಒದಗಿಸಿಕೊಂಡು ಶ್ರೀರಂಗಕ್ಕೆ ಬಂದರು. ಶ್ರೀರಂಗ ದಿವ್ಯ ಮಂಗಳ ವಿಗ್ರಹವನ್ನು ನೋಡುತ್ತಾ ಆಕೆ ಆನಂದ ಪರವಶಳಾಗಿ ಅವನ ದಿವ್ಯ ಅಡಿದಾವರೆಯಲ್ಲಿ ಐಕ್ಯವಾಗಿ ಹೋದಳು. ಆದ್ದರಿಂದಲೇ ವಿಷ್ಣು ಚಿತ್ತರು "ಶ್ವಶುರಮಮರವಂದ್ಯಂ ರಂಗನಾಥಸ್ಯ ಸಾಕ್ಷಾತ್" (ಅಮರರು ವಂದಿಸುವ ರಂಗನಾಥನಿಗೆ ಸಾಕ್ಷಾತ್ ಹೆಣ್ಣು ಕೊಟ್ಟಮಾವ ಎಂಬುವುದಾಗಿ ಪ್ರಸಿದ್ಧರಾದರು. ಶ್ರೀವಿಷ್ಣುಚಿತ್ತರಿಗೆ ದೊಡ್ಡಜ್ಞಾನಿ (ಪೆರಿಯಾಳ್ವಾರ್) ಭಟ್ಟನಾಥ (ಪಂಡಿತ ಶ್ರೇಷ್ಠ) ದ್ವಿಜಕುಲ ತಿಲಕ, ಮರೈವಾಣ (ವೇದಾಂತಿ) ಪುತ್ತೂರ್‌ಕ್ಕೋ (ವಿಲ್ಲಿ ಪುತ್ತೂರಿನ ಯಜಮಾನ,) ಮಹಾವಿದ್ವಾಂಸ ಎಂಬುವ ಹಲವು ನಾಮಧೇಯಗಳುಂಟು. ಪೆರಿಯಳ್ವಾರರ ಅಮೋಘವಾದ ಉಪದೇಶಗಳನ್ನು ಪೆರಿಯಾಳ್ವಾರ್ ತಿರುಮೊಳಿಯನ್ನು ಓದಿ ಆನಂದ ಪಡೆಯ ಬೇಕು, ಅಂತಹ ಅಪೂರ್ವವಾದ ಉಪದೇಶಗಳಿವೆಯಲ್ಲಿ.

1. ಯಾವ ದಿವಸ ಸರ್ವೇಶ್ವರನಾದ ಸ್ವಾಮಿಗೆ ನಾವು ಶೇಷ ಭೂತವೆಂದು ದಾಸ್ಯಭಾವದ ಚೀಟಿಯು ಬರೆಯಲ್ಪಟ್ಟಿತೋ ಅಂದಿನಿಂದ ನಾವೂ ನಮ್ಮ ಪುತ್ರ ಪೌತ್ರಾದಿಗಳೂ ಸಂಸಾರ ಬಂಧನ ದಿಂದ ವಿಮುಕ್ತರಾದೆವು.
2. ಭಗವಂತನನ್ನು ಪ್ರೇಮಪುತ್ರನಂತೆ ಲಾಲಿಸಬೇಕು.
3. ನೀವು ಸದ್ಗತಿಯನ್ನು ಹೊಂದಲು ಏಕೈಕ ಮಾರ್ಗ ಕೈಂಕರ್ಯ.
4. ಅಲ್ಪವಾದ ಕೈವಲ್ಯಸುಖವನ್ನು ದಾಟಿ ನಿತ್ಯವಾದ ಭಗವದ್ಗುಣಾನುಭವ ಸೌಖ್ಯವನ್ನು ಪಡೆಯಲು ಓಡೋಡಿ ಬನ್ನಿ.
5. ಅಡಿಗಡಿಗೆ ನಮೋನಾರಾಯಣ ಎಂಬುವ ಮಂತ್ರರಾಜನನ್ನು ಉಚ್ಚಾರಣೆ ಮಾಡಿ.
6. ನಾವು ಸ್ವತಂತ್ರವಲ್ಲ ಪರಮಾತ್ಮನಿಗೆ ಶೇಷ ಭೂತರು.

ಪಾಂಡ್ಯ ದೇಶದ ರಾಜನಿಂದ ಪಟ್ಟರ್ ಪಿರಾನ್ (ಕವಿ ಶ್ರೇಷ್ಠ) ಎಂಬುವುದಾಗಿ ಬಿರುದುಪಡೆದ ಪೆರಿಯಾಳ್ವಾರರ ದಿವ್ಯ ಪಾದಗಳು ನಮಗೆ ಆಶ್ರಯವಾಗಲಿ.



## ಹರಿದಾಸವಾಣಿ

# ಶ್ರೀಪಾದರಾಜರ ಕೃತಿಗಳಲ್ಲಿ ಪಂಚಭಾವಗಳು

ಹರಿದಾಸ ಸಾಹಿತ್ಯದ ಪ್ರವರ್ತಕರೆನಿಸಿದ ಶ್ರೀಪಾದರಾಯರಿಗೆ ದಾಸಸಾಹಿತ್ಯದಲ್ಲಿ ವಿಶೇಷ ಸ್ಥಾನವಿದೆ. ಹರಿದಾಸಸಾಹಿತ್ಯದ ಪ್ರಕಾರಗಳಲ್ಲಿ ಪ್ರಯೋಗ ನಡೆಸಿ ಯಶಸ್ವಿಯಾದ ಹಿರಿಮೆ ಇವರದು. ಕನ್ನಡದಲ್ಲಿ ಗೋಪಿಗೀತೆ, ಭ್ರಮರಗೀತೆ ಹಾಗೂ ವೇಣುಗೀತಗಳನ್ನು ರಚಿಸಿದವರಲ್ಲಿಯೂ ಶ್ರೀಪಾದರು ಅಗ್ರಗಣ್ಯರೆನಿಸಿಕೊಂಡಿದ್ದಾರೆ. ಹರಿಭಕ್ತಿಯನ್ನೇ ಕೇಂದ್ರವಾಗಿ ಉಳ್ಳ ಇವರ ಕೃತಿಗಳ ಅಂಕಿತ 'ರಂಗ ವಿಠಲ' ಎಂಬುದು.

ಎಲ್ಲರಿಗೂ ತಿಳಿದಂತೆ ಹರಿದಾಸ ಪಂಥ ಒಂದು ಭಕ್ತಿ ಪಂಥ. ಭಕ್ತನೊಬ್ಬ ಭಗವಂತನಲ್ಲಿಟ್ಟಿರುವ ಅನನ್ಯ ಪ್ರೀತಿಯನ್ನೆ ಸ್ಥೂಲವಾಗಿ ಭಕ್ತಿ ಎನ್ನಬಹುದು. ಈ ಭಕ್ತಿಭಾವವನ್ನು ಹರಿದಾಸರೆಲ್ಲರೂ ವಿಧವಿಧರೀತಿಯಲ್ಲಿ, ಹಿನ್ನೆಲೆಯಲ್ಲಿ ಅಭಿವ್ಯಕ್ತಿಸಿದ್ದಾರೆ. ಈ ಭಕ್ತಿಭಾವಗಳು ಐದು ಬಗೆ ಶಾಂತ' ದಾಸ್ಯ, ಸಖ್ಯ, ವಾತ್ಸಲ್ಯ, ಮಧುರಭಾವಗಳು. ಇವನ್ನೆ 'ಪಂಚಭಾವಗಳು'ಎಂದು ಕರೆಯಬಹುದು. ಶ್ರೀಪಾದರಕೃತಿಗಳೂ ಈ ಮಾರ್ಗಕ್ಕೆ ಹೊರತಲ್ಲ. ಶ್ರೀಪಾದರಾಜರ ಕೀರ್ತನೆಗಳನ್ನು ಅಭ್ಯಸಿಸುವಾಗ ಹರಿಯಲ್ಲಿರುವ ಅವರ ಅನನ್ಯಭಕ್ತಿ, ಶ್ರದ್ಧೆಗಳು ವೈವಿಧ್ಯಮಯವಾದ ಭಾವಗಳ ಮೂಲಕ ಹೇಗೆ ಹೊರಹೊಮ್ಮುತ್ತದೆಂಬುದು ಓದುಗನಿಗೆ ಮನದಟ್ಟಾಗುತ್ತದೆ. ವಿಧವಿಧ ಭಾವಗಳ ಮೂಲಕ ಶ್ರೀಪಾದರ ಹರಿಭಕ್ತಿ ಹೇಗೆ ಪ್ರವಹಿಸಿದೆಯೆಂಬುದನ್ನು ಮುಂದೆ ಅವರ ಕೃತಿಗಳ ಮೂಲಕ ಪರಿಶೀಲಿಸಬಹುದು.

ಪರಮಾತ್ಮನ ಹಿರಿಮೆ ಗರಿಮೆಗಳನ್ನರಿತು, ಅವನಲ್ಲಿ ತಲ್ಲೀನಗೊಳ್ಳುವ ಭಕ್ತನ ಭಾವವನ್ನೆ ಶಾಂತ ಭಾವವೆಂದು ಕರೆಯಬಹುದು. ಈ ಭಾವದ ನೆಲೆಯಲ್ಲಿನಿಂತ ಭಕ್ತ ದೈವದ ಮಹಿಮೆಯನ್ನು ಹಾರ್ದಿಕವಾಗಿ ಸ್ತುತಿಸುತ್ತಾನೆ. ಅವನ ರೂಪ, ಗುಣ, ಶಕ್ತಿ ಹೆಸರುಗಳನ್ನು ಹಾಡಿ ಹೊಗಳುತ್ತ, ಭಗವಂತನಲ್ಲಿರುವ ತನ್ನ ಆರ್ತಭಾವವನ್ನು ಪ್ರಕಟಿಸುತ್ತಾನೆ. ಈ ಬಗೆಯ ಕೀರ್ತನೆಗಳು ಶ್ರೀಪಾದರಲ್ಲಿ ಧಾರಾಳವಾಗಿ ಲಭಿಸುತ್ತದೆ.

'ಕೀರ್ತಿಸಿ ಜನರೆಲ್ಲ ಹರಿಯಗುಣ' ಎಂಬ ಕೀರ್ತನೆಯಲ್ಲಿ ಶ್ರೀಪಾದರು ಭಗವಂತನ ಉತ್ತಮೋತ್ತಮವಾದ ಸಾತ್ವಿಕಗುಣಗಳನ್ನು ವರ್ಣಿಸಿ, ಇಂತಹ ಹರಿಯನ್ನು ನೆನೆದರೆ ಎಲ್ಲ ಜನರ ಜೀವನ ಕೃತಾರ್ಥವಾಗುತ್ತದೆಂದು ಸಾರುತ್ತಾರೆ. 'ಕಂತುಪಿತನೆ ನಿನ್ನ ಎಂತು ವರ್ಣಿಪೆ' ಎಂಬ ಕೃತಿ ಶ್ರೀಹರಿಯ ಮಹಿಮೆಯನ್ನು ಹಾಡುವಂತಹುದು. 'ಶ್ರೀರಾಮ ನಿನ್ನ ಪಾದವ ತೋರೋ' ಕೀರ್ತನೆಯಲ್ಲಿ ಶ್ರೀಹರಿಯ ಪಾದದ ಮಹಿಮೆಯನ್ನು ವರ್ಣಿಸಲಾಗಿದೆ. 'ಶ್ರೀರಂಗ ವಿಠಲನ ಮಕುಟಕೆ ಶರಣು' ಎಂಬ ಕೀರ್ತನೆ, ಶ್ರೀಪಾದರ ನೆಚ್ಚಿನ ದೈವವಾದ ರಂಗವಿಠಲನ ಸರ್ವಾಂಗಗಳನ್ನು ಸರಳ ಸುಂದರವಾಗಿ ವರ್ಣಿಸುತ್ತದೆ.

ಸೊಂಪು ನೋಟದ ಚೆಲುವ ಸೋಗೆಗಣ್ಣಿಗೆ
ಶರಣು
ಸಂಪಿಗೆಯ ಕುಸುಮಸಮ ನಾಸಿಕಕೆ ಶರಣು
ಗುಂಪುರತ್ನದ ಕರ್ಣಕುಂಡಗಳಿಗೆ ಶರಣು
ಇಂಪುದರ್ಪಣ ನಿಭ ಕಪೋಲಗಳಿಗೆ ಶರಣು
ಕುಂದ ಕುಟ್ಮಲ ಪೋಲ್ವ ದಂತ ಪಂಕ್ತಿಗೆ
ಶರಣು
ಚಂದ್ರಿಕಾನಿಭ ಮುದ್ದು ಮಂದಹಾಸಕೆ
ಶರಣು
ಅಂದವಾಗಿರುವ ಬಿಂಬೋಷ್ಠಕೆ ಶರಣು
ನಂದಗೋಪನ ಮುದ್ದು ಕಂದನಿಗೆ ಶರಣು

'ಕಂಗಳಿದ್ಯಾತಕೊ ಕಾವೇರಿರಂಗನ ನೋಡದಾ', 'ರಂಗನಾಥನ ನೋಡುವ ಬನ್ನಿರೆ ಶ್ರೀರಂಗನ ದಿವ್ಯವಿಮಾನದಲಿಹನ' ಎಂಬ ಪ್ರಸಿದ್ಧ ಕೀರ್ತನೆಗಳಲ್ಲಿ ಶ್ರೀಪಾದರು ಶ್ರೀರಂಗದ ರಂಗನಾಥನ ದಿವ್ಯಮೂರ್ತಿಯ ಚಿತ್ರಣವನ್ನು ಕೊಟ್ಟು ಶ್ರೀರಂಗ ಕ್ಷೇತ್ರದ ಮಹಾತ್ಮೆಯನ್ನು ಸೊಗಸಾಗಿ ವರ್ಣಿಸುತ್ತಾರೆ. 'ಭೂಷಣಕೆ ಭೂಷಣ ಇದು ಭೂಷಣ ಶೇಷಗಿರಿವಾಸ ಶ್ರೀವರದ ವೆಂಕಟೇಶ' ಎಂಬ ಕೀರ್ತನೆ, ಮನುಷ್ಯ ತನ್ನ ದೇಹವನ್ನು, ಶ್ರೀಹರಿಯನ್ನು ಬರಮಾಡಿ ಕೊಳ್ಳಲು ಹೇಗೆ ಬಳಸಿಕೊಳ್ಳಬೇಕೆಂದು ತಿಳಿಸಿ ಕೊಡುತ್ತದೆ. 'ಸ್ಮರಿಸಿದವರನು ಕಾಯ್ವ ನಮ್ಮ ಸೂರ್ಯನೇಕ ಪ್ರಭಾವ ಸುರಮುನಿಗಳ ಸಂಜೀವ ಶ್ರೀವೆಂಕಟೇಶ ನಮ್ಮ ಪೊರೆವ' ಎಂಬ ಕೀರ್ತನೆಯಲ್ಲಿ ಶ್ರೀಪಾದರು ವೆಂಕಟೇಶನನ್ನು ಸ್ತುತಿಸಿರುವ ರೀತಿ ಬಹಳ ಚೆನ್ನಾಗಿದೆ. 'ಹರೇವೆಂಕಟೇಶ ಶೈಲವಲ್ಲಭ ಪೊರೆಯ ಬೇಕೆನ್ನ' ಕೀರ್ತನೆ ಪರಮಾತ್ಮನಲ್ಲಿರುವ ಶ್ರೀಪಾದರ ಆರ್ತಭಾವಕ್ಕೆ ಉತ್ತಮ ಉದಾಹರಣೆಯಾಗಿದೆ. 'ಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕ' ದಲ್ಲಿ ನೃಸಿಂಹಾವತಾರದ ದೀರ್ಘವರ್ಣನೆಯನ್ನು ಮಾಡುತ್ತ ಶ್ರೀಪಾದರು ತಮ್ಮ ಭಕ್ತಿಯ ಮಹಾಪೂರವನ್ನೇ ಹರಿಸಿದ್ದಾರೆ. ಇಲ್ಲೆಲ್ಲ ಭಗವಂತನಲ್ಲಿ ವಿಲೀನವಾಗಿರುವ ಭಕ್ತಿಯ ಏಕಾಗ್ರತೆ ಯಾರ ಮನವನ್ನೂ ಸೆಳೆಯುವಂಥದು.

ಶ್ರೀಹರಿ ಒಡೆಯ, ತಾನು ಏನಿದ್ದರೂ ಅವನ ಸೇವಕ, ದಾಸ ಎಂಬ ಭಕ್ತನ ಭಾವವೇ ದಾಸ್ಯ ಭಾವ. ದಾಸರ ಬಹುಪಾಲು ಕೀರ್ತನೆಗಳು ಈ ಭಾವವನ್ನೆ ಅಭಿವ್ಯಕ್ತಿಸುತ್ತವೆ. ದಾಸರು ಹನುಮಂತನನ್ನು ದಾಸಭಾವದ ಪ್ರತೀಕವಾಗಿ ತೆಗೆದುಕೊಳುತ್ತಾರೆ. ಭಗವಂತನ ದಾಸನಿಗೆ ದಾಸಸಾಹಿತ್ಯದಲ್ಲಿ ಹರಿಗಿಂತ ಒಂದು ಕೈಮಿಗಿಲಾಗಿಯೆ ಭಕ್ತಿ ಸಂದಿದೆ. 'ಉತ್ತಮರ ಸಂಗ ಎನಗಿತ್ತು ಸಲಹೊ' ಎಂಬ ಶ್ರೀಪಾದರ ಕೀರ್ತನೆ ಈ ಮಾತಿಗೆ ಉತ್ತಮ ಉದಾಹರಣೆಯಾಗಿದೆ. 'ಮಧ್ವನಾಮ' ಎಂಬ ಶ್ರೀಪಾದರ ಕೀರ್ತನೆಯಲ್ಲಿ ಹನುಮ, ಭೀಮ ಮತ್ತು ಮಧ್ವರ ಅವತಾರಗಳನ್ನು ವರ್ಣಿಸಲಾಗಿದೆ. ಈ ಕೀರ್ತನೆಯಲ್ಲಿ ಹನುಮನ ಮಹಿಮೆಯನ್ನು ಕುರಿತ ಭಾಗ ಮನೋಹರವಾಗಿದೆ.

ತನ್ನ ಇಡೀ ಬದುಕು ದೈವಾಧೀನ, ತನ್ನ ಸರ್ವಸ್ವವನ್ನೂ ಪರಮಾತ್ಮನಿಗೊಪ್ಪಿಸಿ ಅವನು ನಡೆಸಿದಂತೆ ನಡೆಯಬೇಕು, ಏನಿದ್ದರೂ ಅವನ ಮೊರೆ ಹೋಗುವುದೊಂದೇ ತನ್ನ ಕೆಲಸ ಎಂಬ ಭಾವವನ್ನು ಶ್ರೀಪಾದರು 'ಪಾಲೊಳಗದ್ದು ನೀರೊಳಗದ್ದು' ಎಂಬ ಕೀರ್ತನೆಯಲ್ಲಿ ಶಕ್ತವಾಗಿ ಪ್ರತಿಪಾದಿಸಿದ್ದಾರೆ. ಈ ಕೀರ್ತನೆಯ ಒಂದು ಭಾಗವನ್ನು ಗಮನಿಸಿ.

ಪಾಲೊಳಗದ್ದು ನೀರೊಳಗದ್ದು ಹರಿ
ನಾನಿನ್ನ ನಂಬಿದೆನೋ ॥ ಪ ॥
ಜಲಜನಾಭ ನೀನಿಟ್ಟ ತೆರದಲ್ಲಿ ಇರುವೆನಯ್ಯ
॥ಅ.ಪ॥

ಶ್ರೀಮತಿ ಎನ್. ಪುಷ್ಪ

ಸುಖದುಃಖದೊಳಗಿಡಿಸು ಸುಕೃತ ದುಷ್ಕೃತ ಮಾಡು
ನಿಖಿಳ ದುರಿತದೊಳೆನ್ನ (ನೋ)ಲ್ಯಾಡಿಸು
(ಅಖಿಳ ಖಳನೆನಿಸು) (ಅಭಯ ಭಯವ) ತೂಸು
ಮಕರಕುಂಡಲ ನಿನ್ನ ಮತವೆ (ಸನ್ಮ) ತವಯ್ಯ ॥

ಇದಲ್ಲದೆ, ಶ್ರೀಪಾದರ 'ಇಟ್ಟಾಂಗೆ ಇರುವೆನೋ ಹರಿಯೆ ಎನ್ನದೊರೆಯೆ', 'ಶರಣದಿ ತನುಮನ ಧನಂಗಳೆಲ್ಲವು', 'ಹರಿ ನಾನಂಬಿದೆನೊ', 'ದುರಿತ ಗಜ ಪಂಚಾನನ ನರಹರಿಯೇ', 'ದೇವರ ದೇವ ಕಾಯೋ ಗೋವಿಂದ', 'ನಾರಾಯಣ ನಿನ್ನ ನಂಬಿದೆ', 'ಶ್ರೀರಾಮ ನಿನ್ನ ಪಾದವ ತೋರೊ', 'ಪಾಲಿಸಯ್ಯ ಸ್ವಾಮಿ, ಕೃಷ್ಣ ಪಾಲಿಸಯ್ಯ', 'ಸಾಗಿಬಾರಯ್ಯಾ ಬಾಗಿ ನಮಿಸುವೆ' ಇತ್ಯಾದಿ, ಕೀರ್ತನೆಗಳು ದಾಸ್ಯ ಭಾವಕ್ಕೆ ಉತ್ತಮ ಉದಾಹರಣೆಗಳಾಗಿವೆ. ಇಲ್ಲೆಲ್ಲ ಪ್ರಕಟವಾಗಿರುವ, ಭಕ್ತನ ಪರಮಾತ್ಮನ ಬಗೆಗಿನ ನಂಬಿಕೆ, ವಿಶ್ವಾಸ, ಸರ್ವಸಮರ್ಪಣ ಭಾವಗಳು ಗಮನಾರ್ಹ.

ಭಕ್ತ ಭಗವಂತನಲ್ಲಿ ತೋರುವ ಸಲಿಗೆಯ ಸ್ನೇಹಭಾವವೇ ಸಖ್ಯಭಾವ. ಭಕ್ತ ತನ್ನಗೆಳೆಯನಲ್ಲಿ ತೋರುವ ಸಿಟ್ಟು, ಹಟ, ನಿಂದಾಸ್ತುತಿಗಳೆಲ್ಲ ಶ್ರೀಪಾದರ ಇಂತಹ ಕೀರ್ತನೆಗಳಲ್ಲಿ ಜೀವಂತವಾಗಿ ಪ್ರತಿಪಾದಿಸಲ್ಪಟ್ಟಿದೆ. ನಿರ್ಭರ ಭಕ್ತಿಯಿಂದ ಎಷ್ಟು ಸ್ಮರಿಸಿದರೂ ದಯೆ ತೋರದ ಭಗವಂತನನ್ನು ಶ್ರೀಪಾದರು ಅತ್ಯಂತ ಸಲಿಗೆಯಿಂದ 'ಮರೆತೆಯೇನೋ ರಂಗಾ ಮಂಗಳಾಂಗ ತುರುಕರ ಕಾಯ್ವಲ್ಲಿ ತೊಂಡನಾಗಿದ್ದೆನ್ನ' ಎಂಬ ಕೀರ್ತನೆಯಲ್ಲಿ ಪ್ರಶ್ನಿಸಿದ್ದಾರೆ. ಬಾಲತನದ ತಮ್ಮಿಬ್ಬರ ಸ್ನೇಹವನ್ನು ನೆನಸಿಸುವ ಪರಿಯಿದು.

ಕೋಲು ಕೈಯಲಿ ಕೊಳಲು ಜೋಲುಗಂಬಳಿ ಹೆಗಲ
ಮ್ಯಾಲೆ ಕಲ್ಲಿ ಚೀಲ ಕೊಂಕಳಲ್ಲಿ
ಕಾಲಗಡವನಿಟ್ಟು ಕಾಡೊಳಿಹ ಪಶುಹಿಂಡ
ಲಾಲಿಸುವ ಬಾಲಕರ ಮ್ಯಾಳದೊಳಗಿದ್ದೆನ್ನ

ಅನ್ನ, ಅರಿವೆ, ಮಡದಿಮಕ್ಕಳನ್ನೆಲ್ಲ ಬಿಟ್ಟು ಧೃಢವಾಗಿ ನಂಬಿದರೂ ಓಗೊಡದ ಭಗವಂತನ ಬಗ್ಗೆ ಸಿಟ್ಟಿನಿಂದ 'ಯಾಕೆ ಪುಟ್ಟಿಸಿದಿ, ನೀ ಸಾಕಲಾರದೆ ಜಗದೇಕ ಕಾರಣ ಪುರುಷ ಕೃಷ್ಣ ........ ನಿನ್ನ ನಂಬಿ ಬಂದು ಅಡವಿ ಪಾಲಾದೆನಲ್ಲೊ' ಎಂಬ ಕೀರ್ತನೆಯಲ್ಲಿ ನೇರವಾಗಿ ತರಾಟೆಗೆ ತೆಗೆದುಕೊಳ್ಳುವ ಚಿತ್ರ ಹೃದಯಸ್ಪರ್ಶಿಯಾಗಿದೆ. ಹಾಗೆಯೆ ಈ ವರಾತ ಬರಬರುತ್ತಾ ನಯವಾಗಿ ಕೋರಿಕೆಯಾಗಿ ಮಾರ್ಪಟ್ಟಿರುವ ರೀತಿಯೂ ಈ ಕೀರ್ತನೆಯಲ್ಲಿ ಮನಸೆಳೆವ ಅಂಶವಾಗಿದೆ.

ಕೆಲವೇಳೆ ಭಕ್ತ ಭಗವಂತನನ್ನು ಹೆದರಿಸಿ, ನಿಂದಿಸಿ ಒಲಿಸಿ ಕೊಳ್ಳುವುದೂ ಉಂಟು. 'ವಾಸುದೇವ ನಿನ್ನ ಮರ್ಮ ಕರ್ಮಂಗಳ ದೇಶದೇಶದಲ್ಲಿ ಪ್ರಕಟಿಸಲೊ' ಎಂಬ ಸುಂದರವಾದ ಕೀರ್ತನೆ ಈ ಮಾದರಿಗೆ ಉತ್ತಮ ಉದಾಹರಣೆಯಾಗಿದೆ.

ಬೇಸರದೆ ಎನ್ನ ಹೃದಯ ಕಮಲದಲ್ಲಿ
ವಾಸವಾಗಿ ಸುಮ್ಮನಿದ್ದೀಯೊ ॥ಪ.॥
ತರಳತನದಲಿದ್ದು ದುರುಳನಾಗಿ ಬಂದು
ಒರಳಿಗೆ ಕಟ್ಟಿಸಿ ಕೊಂಡುದನು
ತರುವಕಾಯಲು ಪೋಗಿ ಕಲ್ಲಿಯೋಗರವನು
ಗೊಲ್ಲರ ಕೂಡೆ ನೀ ಉಂಡುದನು
ನೆರೆಮನೆ ಹೊರಮನೆಗಳ ಪೊಕ್ಕು ಬೆಣ್ಣೆಯ
ಅರಿಯದಂತೆ ಕದ್ದುಮೆದ್ದುದನು
ಕೆರಳಿಸಿದೆಯಾದರೆ ಒದರುವೆ ಎಲೊ ನರ
ಹರಿ ಎನ್ನಬಾಯಿಗೆ ಬಂದುದನು ॥

ಇಂತಹ ಕೀರ್ತನೆಗಳು ತಮ್ಮ ನಾಟಕೀಯ ಗುಣದಿಂದ ಮನಸೆಳೆಯುತ್ತವೆ ಅಲ್ಲದೆ ಸಖ್ಯಭಾವದ ಈ ಕೀರ್ತನೆಗಳಲ್ಲಿ ಕಾಣುವ ಮುಖ್ಯಾಂಶವೆಂದರೆ ಸಲಿಗೆಯ ಸ್ನೇಹಭಾವದ ಮೂಲಕ ಪರಮಾತ್ಮ ಹಾಗೂ ತನ್ನ ನಡುವಿನ ಸಂಬಂಧವನ್ನೆತ್ತಿ ಹೇಳುತ್ತ, ಅವನ ಮುಂದೆ ತನ್ನ ಅಲ್ಪತ್ವವನ್ನು ವಿನಯವನ್ನು ತೋರುತ್ತಾ ಅದಮೂಲಕ ಭಗವಂತನ ಹಿರಿಮೆ ಆಧಿಕ್ಯವನ್ನೆತ್ತಿ ಹಿಡಿದಿರುವುದು ಇಲ್ಲೆಲ್ಲ ಕಾಣುವ ಭಕ್ತ ಭಗವಂತರ ಸಖ್ಯ ಕೃಷ್ಣಾರ್ಜುನರ ಸಖ್ಯ. ಒಟ್ಟಿನಲ್ಲಿ ಇಂತಹ ಕೀರ್ತನೆಗಳ ಆಕರ್ಷಣೆಯೆಂದರೆ ಅವುಗಳ ಜೀವಂತಿಕೆ. ಅದ್ದರಿಂದಲೇ ಈ ಕೀರ್ತನೆಗಳು ಬೇಗನೆ ನಮ್ಮ ಮನ ಮುಟ್ಟುತ್ತವೆ.

ಭಗವಂತನನ್ನು ಮಗುವಾಗಿ, ಬಾಲಕನಾಗಿ ಕಲ್ಪಿಸಿಕೊಂಡು ವಾತ್ಸಲ್ಯ ತೋರಿಸುವುದರ ಮೂಲಕ ಹರಿಭಕ್ತಿಯನ್ನು ಪ್ರಕಟಿಸುವ ಭಾವವೇ ವಾತ್ಸಲ್ಯಭಾವ. ಶ್ರೀಪಾದರ ಹಲವಾರು ಕೀರ್ತನೆಗಳಲ್ಲಿ ಈ ಭಾವ ಮಡುಗಟ್ಟಿನಿಂತಿದೆ. ಈ ಭಾವದ ಎಲ್ಲ ಕೀರ್ತನೆಗಳ ಮೂಲಕ ದಾಸರು ಬಾಲ ಕೃಷ್ಣನ ಲೀಲೆಗಳನ್ನು ಧಾರಾಳವಾಗಿ ವರ್ಣಿಸಿ ಆನಂದ ಪಡುತ್ತಾರೆ. ತಾವೇ ಯಶೋದೆಯಾಗಿ, ಹಲವೇಳೆ ಗೋಪಿಯಾಗಿ ಯಶೋದೆಯ ಶಂಕೆ ಆನಂದಗಳನ್ನೆ ತಾವು ಪ್ರಕಟಿಸುತ್ತ ಪರಮಾತ್ಮನ ಮೇಲಿನ ತಮ್ಮ ಭಕ್ತಿಯನ್ನು ಸಾದರಪಡಿಸುತ್ತಾರೆ.

ಮನೆಯಲ್ಲಿ ಬೇಕಾದ ಸಾಧನ ಸಲಕರಣೆಗಳಿದ್ದರೂ ಆಚೆಗೆಹೋಗಿ ಮರಳಿಬಂದ ಕೃಷ್ಣನನ್ನು ಕುರಿತು ಯಶೋದೆ 'ಎಲ್ಲಾಡಿ ಬಂದೆ ಮುದ್ದು ರಂಗಯ್ಯ, ನೀ ಎಲ್ಲಾಡಿಬಂದೆ ಎನ್ನ ಕಣ್ಣ ಮುಂದಾಡದೆ' ಎಂದು ಕೇಳುತ್ತಾಳೆ. ಈ ಕೀರ್ತನೆಯಲ್ಲಿ ತಾಯಿಯೊಬ್ಬಳು ತನ್ನ ಮಗುವಿನ ಬಗ್ಗೆ ತೋರುವ ಆಂತಕ ಶಂಕೆಗಳು ಸಮರ್ಪಕವಾಗಿ ನಿರೂಪಿತವಾಗಿವೆ. ಒಮ್ಮೆ ಆಟವಾಡ ಹೋಗಿ ಕೊರಳ ಪದಕ, ಬೆರಳ ಉಂಗುರಗಳನ್ನೆಲ್ಲ ಕಳೆದುಕೊಂಡು ಬಂದ ತುಂಟ ಬಾಲಕೃಷ್ಣನ ಬೇಜವಾಬ್ದಾರಿಯ ಬಗ್ಗೆ ಸಿಟ್ಟು ತಾಳುವ ಚಿತ್ರಣ 'ಎಲ್ಲಾಡಿ ಬಂದ್ಯೋನೀ ಹೇಳಯ' ಎಂಬ ಕೀರ್ತನೆಯಲ್ಲಿ ಸೊಗಸಾಗಿ ಚಿತ್ರಣಗೊಂಡಿದೆ. ಬಾಲಕೃಷ್ಣನು ತಾಯಿಯ ಬಳಿ ಬಂದು, ಗೋಪಿಯರು ತನ್ನನ್ನು ದೂರುವ ರೀತಿಯನ್ನೆಲ್ಲ ತಿಳಿಸಿ ಅವನೆಲ್ಲ ನಂಬಬೇಡವೆಂದು ಚಾಣಾಕ್ಷತನದಿಂದ ಆಡುವ ಮುದ್ದು ಮಾತುಗಳ ಚಿತ್ರಣ 'ಗೊಲ್ಲತಿಯರೆಲ್ಲ ಕೂಡಿ ಎನ್ನ ಮೇಲೆ ಇಲ್ಲದ ಸುದ್ದಿಪುಟ್ಟಿಸಿ ಕಳ್ಳನೆಂದು ದೂರುತಾರೆ, ಗೋಪಿ ಎನ್ನ ಕೊಲ್ಲಬೇಕೆಂದು ಬಗೆಯೆ' ಎಂಬ ಕೀರ್ತನೆಯಲ್ಲಿದೆ ಈ ಕೀರ್ತನೆಯಲ್ಲಿ ತಾಯಿಯ ಬಳಿ ಬಾಲಕನೊಬ್ಬ ದೂರು ಹೇಳುವ ಚಿತ್ರ ಅತ್ಯಂತ ಸಹಜವಾಗಿ, ಸುಂದರವಾಗಿ ಚಿತ್ರವತ್ತಾಗಿ ಮೂಡಿ ಬಂದಿದೆ. ದಾಸರ ವಾತ್ಸಲ್ಯಭಾವ ಹೇಗೆ ಚಿಮ್ಮಿ ಹರಿಯುತ್ತದೆಂಬುದಕ್ಕೆ ಈ ಕೀರ್ತನೆಯ ಸರಸವಾದ ಮುಗ್ಧ ಮಧುರ ಚಿತ್ರವನ್ನು ನೋಡಿ

ಹರವಿಯ ಹಾಲು ಕುಡಿಯಲು ಎನ್ನ ಹೊಟ್ಟೆ
ಕೆರೆಯೇನೆ ಹೇಳಮ್ಮಯ್ಯ
ಕರೆದು ಅಣ್ಣನ ಕೇಳಮ್ಮ ಉಂಟಾದರೆ
ಒರಳಿಗೆ ಕಟ್ಟಮ್ಮಯ್ಯ
ಪುಂಡುತನವ ಮಾಡಲು ನಾನು ದೊಡ್ಡ
ಗಂಡಸೇನೆ ಹೇಳಮ್ಮಯ್ಯ ಎನ್ನ
ಕಂಡವರು ದೂರುತಾರೆ ಗೋಪಮ್ಮ ನಾನಿನ್ನ
ಕಂದನಲ್ಲವೇನೆ ಅಮ್ಮಯ್ಯ

ನಾನಾ ಆಭರಣಗಳಿಂದ ಅಲಂಕೃತನಾಗಿ, ಮನ್ಮಥನನ್ನ ಮೀರಿಸುವ ರೂಪವುಳ್ಳ ತನ್ನ ಮಗ ಬೀದಿಗೆ ಹೋದರೆ, ಊರ ಹೆಂಗಸರೆಲ್ಲ ಅವನ ರೂಪಕ್ಕೆ ಮರುಳಾಗಿ ಎಲ್ಲಿ ದೃಷ್ಟಿತಾಕಿಸಿಬಿಡುವರೋ ಎಂದು ಶಂಕಿಸುವ ಪರಿ 'ದೃಷ್ಟಿ ತಾಕಿತೋ ಬೀದಿ ಮೆಟ್ಟಬ್ಯಾಡವೋ' ಎಂಬ ಕೀರ್ತನೆಯಲ್ಲಿ ಬಹಳ ಸುಂದರವಾಗಿದೆ. ವಾತ್ಸಲ್ಯ ಭಾವದ ಕೀರ್ತನೆಗಳ ಮತ್ತೊಂದು ವೈಶಿಷ್ಟ್ಯವೆಂದರೆ ಬಾಲಕನ ಭಾವಕ್ಕೆ ತಕ್ಕಂತೆ ಬಾಲ ಭಾಷೆಯನ್ನು ಬಳಸಿರುವುದು ಗಮನಾರ್ಹ. 'ಏಕೆ ದೂರುವಿರೇ ರಂಗಯ್ಯನ' ಕೀರ್ತನೆಯಲ್ಲಿ ಕೃಷ್ಣನ ಮೇಲೆ ಚಾಡಿ ಹೇಳುವವರ ಮಾತನ್ನೆಲ್ಲ ಕೇಳಿ ಬೇಸತ್ತ ಯಶೋದೆ ಮಗನ ಪರ ವಹಿಸಿ ಕೊಂಡು ಬರುವ ಚಿತ್ರ ಸಾಮಾನ್ಯತಾಯಿಯೊಬ್ಬಳ ಚಿತ್ರವನ್ನೇ ಪ್ರತಿಮಿಸುತ್ತದೆ. ದಟ್ಟಡಿಯಿಡಲರಿಯದ ಈ ಬಾಲ

ದನದ ಕೊಟ್ಟಿಗೆಗೆ ಹೋಗಿ ಹಾವಳಿಮಾಡಲು ಹೇಗೆ ಸಾಧ್ಯ? ಹಾಲು ಮೊಸರು ಬೆಣ್ಣೆ ನಮ್ಮಾಲಯದೊಳಿಲ್ಲವೆ? ಈ ಗೋಪಬಾಲನ ನೋಡಿ ಸೈಸದೆ, ಅವನ ಮೇಲೆ ಕಳ್ಳತನದ ಆರೋಪ ಹೊರಿಸುವ ನಿಮಗೆ 'ನಾಚಿಕಿಲ್ಲವೆ' ಎಂದು ಗೋಪಿಯರಿಗೇ ಸವಾಲನ್ನೆಸೆಯುವ ಯಶೋದೆಯು ಸ್ವಾರಸ್ಯವಾದ ಚಿತ್ರ ತಾಯ್ತನದ ತುಡಿತದಿಂದಲೇ ಬಂದುದಾಗಿದೆ.

ಶ್ರೀಕೃಷ್ಣನನ್ನು ಮಗುವೆಂದು ಭಾವಿಸಿದರೂ ಅವನು ದೇವರವತಾರನೆಂಬುದನ್ನು ದಾಸರು ಮರೆಯುವುದಿಲ್ಲ. ಆದ್ದರಿಂದಲೇ ರಾಮಾವತಾರ, ಕೃಷ್ಣಾವತಾರದ ಲೀಲೆಗಳನ್ನು ಮನಸಾರೆ ಹಾಡಿ ಹೊಗಳುತ್ತಾರೆ 'ಪೋಪು ಹೋಗೋಣ ಬಾರೊ ರಂಗ, 'ಲಾಲಿಗೋವಿಂದಲಾಲಿ' ಇತ್ಯಾದಿಗಳಲ್ಲಿ.

ಸತಿಪತಿಯರ ಸಂಬಂಧದ ಮೂಲಕ ಭಕ್ತ ಭಗವಂತನ ಸಂಬಂಧವನ್ನು ವ್ಯಕ್ತ ಪಡಿಸುವ ಭಾವವೇ ಮಧುರ ಭಾವ. ಎಲ್ಲ ದಾಸರ ಅನೇಕ ಕೀರ್ತನೆಗಳು ಈ ಅಂಶವನ್ನು ದೃಢಪಡಿಸುತ್ತವೆ. ಇಲ್ಲೆಲ್ಲ ಭಕ್ತನ ಆತ್ಮಸಮರ್ಪಣೆಯ ಧೋರಣೆ ಎದ್ದು ಕಾಣುತ್ತದೆ. ಶ್ರೀಪಾದರ ಭ್ರಮರಗೀತೆಗಳು ಇದಕ್ಕೆ ಉತ್ತಮ ಉದಾಹರಣೆಯಾಗುತ್ತವೆ. 'ಭೃಂಗಾ ನಿನ್ನಟ್ಟಿದನೆ ಶ್ರೀರಂಗಾ' ಎಂಬ ಭ್ರಮರಗೀತೆಯಲ್ಲಿ ಮಧುರೆಗೆ ಹೋದ ಕೃಷ್ಣನ ಅಗಲಿಕೆಯಿಂದ ತಪ್ತರಾದ ಗೋಪಿಯರು ತಪ್ತಸ್ಥಿತಿಯಲ್ಲಿರುವಾಗ ಅವರಿಗೆ ದುಂಬಿಯೊಂದು ಎದುರಾಗುತ್ತದೆ. ಅದನ್ನೇ ಕೃಷ್ಣನ ದೂತನಿರಬಹುದೆಂದು ಕಲ್ಪಿಸಿ, ಕೃಷ್ಣನ ಯೋಗಕ್ಷೇಮವನ್ನು ವಿಚಾರಿಸಿ, ದುಂಬಿಯ ಮುಂದೆಯೇ ಗೋಪಿಯರು ತಮ್ಮ ವಿರಹದ ಅಳಲನ್ನು ಹೀಗೆ ತೋಡಿ ಕೊಳ್ಳುತ್ತಾರೆ

ಮಧುಕುಂಜವನದಲ್ಲಿ ಮಧುವೈರಿ ಕೊಳಲನೂದಲು
ಮಧುರ ನಿಸ್ವನ ಕೇಳಿ ಮದಿರಾಕ್ಷಿಯರೆಲ್ಲ ಧಾ
ಮದ ಧ್ಯಾನವ ಬಿಟ್ಟು ಮೃಗಮದಗಂಧವಿಡಿ
ದೈದಿ ಮದನನಯ್ಯನ ಕಾಣುತ ಶ್ರೀಹರಿಯ
ಮುದವೇರಿ ತಲೆವಾಗಿ ಮೇದಿನಿ ನಿಟ್ಟಿಸಲಾಗ
ಮೃದುವಾಕ್ಯ ದೊಳೆಮ್ಮಪ್ಪಿ ಅಧರಾಮೃತ ಭೋಜನ
ಕ್ಕೊದಗುವ ಸತತ ಸನ್ನದ್ಧ ನಮ್ಮನಗಲಿ ಕ
ಳ್ಳದೆಯಾದನೆಂತೋ ಕೃಪಾಳು ಹೇ ಕಿತವಾ

'ಕಂಜನೇತ್ರೆ ಶ್ರೀ ಶುಭ ಮಂಜುಳ ಗಾತ್ರೆ' ಎಂಬ ಸಂಭಾಷಣಾರೂಪದಲ್ಲಿ ರಚಿತವಾಗಿರುವ ಶ್ರೀಪಾದರ ಕೀರ್ತನೆ, ರುಕ್ಮಿಣಿ ಸತ್ಯಾಭಾಮೆಯರಲ್ಲಿ ಪತಿ ಕೃಷ್ಣನಿಗೆ ತಮ್ಮಿಬ್ಬರಲ್ಲಿ ಯಾರು ಹೆಚ್ಚು ಪ್ರೀತಿ ಪಾತ್ರರು, ಹತ್ತಿರದವರು ಎಂಬ ವಿಚಾರದ ಬಗೆಗೆ ನಡೆದ ಚರ್ಚೆಯನ್ನೂ ಕೃಷ್ಣನ ಆಗಮನದಿಂದ ಕಡೆಗೆ ಅವರ ಸವತಿ ಭಾವ ಸರಸ ಭಾವವಾಗಿ ಮಾರ್ಪಡುವುದನ್ನೂ ಬಹಳ ಚೆನ್ನಾಗಿ ಒಡಮೂಡಿಸುತ್ತದೆ. ಈ ಕೀರ್ತನೆಯಲ್ಲಿ ರುಕ್ಮಿಣಿ ಸತ್ಯಭಾಮೆಯರ ಸವತಿ ಮಾತ್ಸರ್ಯದ ಚಿತ್ರಣ ಸಹಜ ಸರಳವಾಗಿ ನಿರೂಪಿತ ಗೊಂಡಿದೆ.

ರುಕ್ಮಿಣಿ ಸತ್ಯಭಾಮೆಯರಿಗಿರಲಿ ನಂದ ಗೋಕುಲದ ಗೋಪಿಯರಿಗಂತೂ ಶ್ರೀಕೃಷ್ಣನ ವಿರಹವೆಂಬುದು ಸಹಿಸಲಸದಳವಾದ ವಿಷಯ. ಶ್ರೀಕೃಷ್ಣನ ಅಗಲಿಕೆಯಿಂದಾಗಿ ಗೋಪಿಯರಿಗೆ ಉಂಟಾಗುವ ನೋವನ್ನು, ಆ ಮೂಲಕ ಅವರಿಗೆ ಪರಮಾತ್ಮನಲ್ಲಿರುವ ದಿವ್ಯ ಪ್ರೇಮವನ್ನು ಚಿತ್ರಿಸುವ ಕೀರ್ತನೆಗಳೇ ಶ್ರೀಪಾದರಲ್ಲಿ ಹೆಚ್ಚು. 'ಕೇಳಿದ್ಯಾ ಕೌತುಕವನು ಕೇಳಿದ್ಯಾ' ಕೀರ್ತನೆಯಲ್ಲಿ ಗೋಪಿಯೊಬ್ಬಳು ಗೆಳತಿಯೊಂದಿಗೆ, ಕೃಷ್ಣ ಯಾರಿಗೂ ಹೇಳದೆ ಬಲರಾಮನೊಂದಿಗೆ ಸೋದರಮಾವ ಅಕ್ರೂರನ ಮನೆಗೆ ಹೊಗುವ ವಿಷಯವನ್ನು ಚರ್ಚಿಸುವ ಚಿತ್ರವಿದೆ. 'ಮಾನನಿಧಿ ಕೃಷ್ಣ ಮಧುರೆ ಗೈದುವನಂತೆ' ಎಂಬ ಕೀರ್ತನೆಯಲ್ಲಿ ಮಧುರೆಗೆ ಹೊರಟು ಹೋದರೆ ತಾವು ಕಾಲಕಳೆಯುವುದು ಹೇಗೆಂದು ಚಿಂತಿಸುತ್ತ ವಿರಹದಿಂದ ಬಳಲುವ ಗೋಪಿಯರ ಗುಂಪೊಂದು, ಸರಿರಾತ್ರಿಯಲ್ಲಿ ಕೃಷ್ಣನನ್ನು ತಡೆಗಟ್ಟಿ 'ಬ್ಯಾಡ ಮಧುರೆಗೆ ಪೋಗಬ್ಯಾಡೆಲವೊ ಶ್ರೀಕೃಷ್ಣ ದೈನ್ಯದಿ ನೋಡು ನಮ್ಮನ್ಯಾಲೆ ದಯಮಾಡು ಕೃಪಾಕರನೆ' ಎಂದು ಬೇಡಿ ಕೊಳ್ಳುವ ಚಿತ್ರ ಹೃದ್ಯವಾಗಿ ನಿರೂಪಣೆಗೊಂಡಿದೆ. ಈ ಕೀರ್ತನೆಯಲ್ಲಿ ಕಾಣುವ ಸಂಭಾಷಣಾ ಚಾತುರ್ಯ, ಕೃಷ್ಣನ ಮೇಲಿನ ಗೋಪಿಯರ ಪ್ರೀತಿಗಳು ಮನಸೆಳೆಯುವಂತಿವೆ. 'ಈ ವನದೆಡೆಗಳು ಈ ಲತೆವನಗಳು' ಕೀರ್ತನೆಯಲ್ಲಿ ಗೋಪಿಯೊಬ್ಬಳು ಕೃಷ್ಣನೊಂದಿಗೆ ತಾನು ರಮಿಸಿದ ಸ್ಥಳಗಳನ್ನು ಗೆಳತಿಯೊಂದಿಗೆ ಹೇಳಿಕೊಂಡು, ಈಗ ಕೃಷ್ಣ ನಿಲ್ಲವಲ್ಲ ಎಂದು ಪರಿತಪಿಸುವ ಚಿತ್ರಣವಿದೆ. 'ಇನ್ನಿವನು ಈಗ ಬರಲಿದಕೆ ಬಗೆಯೇನು' ಎಂಬ ಕೀರ್ತನೆಯಲ್ಲಿ ರತಿವಿದಗ್ಧರಾದ ಮಧುರೆಯ ನಿಪುಣ ಹೆಂಗಸರಿಗೆ, ಎಲ್ಲಿ 'ರಸಿಕ' ಕೃಷ್ಣ ಮರುಳಾಗಿ ತನ್ನನ್ನು ಮರೆತು ಬಿಡುವನೋ ಎಂದು ಹಂಬಲಿಸುವ ಗೋಪಿಯೊಬ್ಬಳ ಅಳಲು, ಶಂಕೆ, ಅಸೂಯೆಗಳು ಮನಮುಟ್ಟುವಂತೆ ವರ್ಣಿತವಾಗಿದೆ. 'ವಿಧಿಗೆ ದಯವಿಲ್ಲಕ್ಕ ಎಮ್ಮ ಮ್ಯಾಲೆ', 'ಚಿತ್ತಜನಯ್ಯನ ಚಿಂತಿಸು ಮನವೇ' ಇತ್ಯಾದಿ ಕೀರ್ತನೆಗಳೂ ಇದೇ ಭಾವದವು.

ಇಷ್ಟಲ್ಲದೆ ಕೃಷ್ಣನೊಂದಿಗಿನ ಗೋಪಿಯರ ದಿವ್ಯ ಸಮಾಗಮದ ಚಿತ್ರಣದ ಕೆಲವು ಕೀರ್ತನೆಗಳೂ ಶ್ರೀಪಾದರಾಜರಲ್ಲಿವೆ. 'ತುರುಗಾಯ ಬಂದ ಗೋಪಿಯ ಕಂದ' ಎಂಬ ವೇಣುಗೀತ, 'ರಂಗ ಕೊಳಲನೂದುತ ಬಂದ ಯಶೋದೆಯ ಕಂದ,' 'ಚಿಂತೆಯನು ಮಾಡಿದಿರು ಚದುರೆ', 'ಸದ್ದುಮಾಡಲಿ ಬ್ಯಾಡವೋ'– ಇತ್ಯಾದಿ ಕೀರ್ತನೆಗಳಲ್ಲಿ ಈ ಅಂಶವನ್ನು ಗುರ್ತಿಸಬಹುದು.

ಒಟ್ಟಿನಲ್ಲಿ ದ್ವೈತ ಪಂಥದ ಹಿನ್ನೆಲೆಯಲ್ಲಿ ರಚಿತವಾಗಿರುವ ಶ್ರೀಪಾದರಾಜರ ಕೀರ್ತನೆಗಳು, ತಮ್ಮ ವೈವಿಧ್ಯಮಯವಾದ ಭಕ್ತಿ ಭಾವಗಳಿಂದಾಗಿ ಕನ್ನಡದ ಭಕ್ತಿ ಸಾಹಿತ್ಯಕ್ಕೆ ಅಪೂರ್ವವಾದ ವೈಶಿಷ್ಟ್ಯವನ್ನು ಒದಗಿಸಿ ಕೊಟ್ಟಿವೆ. ★

(೯ನೇ ಪುಟದಿಂದ)

ತ್ಮನೆನಿಸಿದ್ದಾನೆ. ಅವನೇ ಈ ದೇಹದಲ್ಲಿ ನೆಲಸಿರುವ ಪರಮ ಪುರುಷ.

ಯ ಏವಂ ವೇತ್ತಿ ಪುರುಷಂ
ಪ್ರಕೃತಿಂ ಚ ಗುಣೈಃ ಸಹ ।
ಸರ್ವಥಾ ವರ್ತಮಾನೋಽಪಿ
ನ ಸ ಭೂಯೋಽಭಿಜಾಯತೇ ॥ 23

ಯಾವನು ಹೀಗೆ ಪುರುಷನನ್ನೂ, ಗುಣಗಳನ್ನೂ, ಮಾಯಾಶಕ್ತಿಯನ್ನೂ ತಿಳಿಯುತ್ತಾನೋ ಅವನು ಯಾವ ಬಗೆಯಲ್ಲಿದ್ದರೂ ಮತ್ತೆ ಹುಟ್ಟುವುದಿಲ್ಲ.

ಧ್ಯಾನೇನಾತ್ಮನಿ ಪಶ್ಯಂತಿ
ಕೇಚಿದಾತ್ಮಾನಮಾತ್ಮನಾ ।
ಅನ್ಯೇ ಸಾಂಖ್ಯೇನ ಯೋಗೇನ
ಕರ್ಮಯೋಗೇನ ಚಾಪರೇ ॥ 24

ಕೆಲವರು ಮನಸ್ಸಿನಲ್ಲಿ ಧ್ಯಾನಮಾರ್ಗದಿಂದ, ಕೆಲವರು ವೇದಾಂತ ಜ್ಞಾನಮಾರ್ಗದಿಂದ, ಇನ್ನು ಕೆಲವರು (ಈಶ್ವರ ಪ್ರೀತಿಗಾಗಿ) ಕರ್ಮವನ್ನು ಮಾಡುವುದರಿಂದ ಶುದ್ಧವಾದ ಮನಸ್ಸಿನಲ್ಲಿ ಭಗವಂತನನ್ನು ಕಾಣುತ್ತಾರೆ.

ಅನ್ಯೇ ತ್ವೇವಮಜಾನಂತಃ
ಶ್ರುತ್ವಾನ್ಯೇಭ್ಯ ಉಪಾಸತೇ ।
ತೇಽಪಿ ಚಾತಿತರಂತ್ಯೇವ
ಮೃತ್ಯುಂ ಶ್ರುತಿಪರಾಯಣಾಃ ॥ 25

ಇದನ್ನು ಅರಿಯದವರು ಬೇರೆ ಕೆಲವರು ಇತರರಿಂದ ಕೇಳಿ ಅವರು ಹೇಳಿದಂತೆ ಉಪಾಸನೆ ಮಾಡುತ್ತಾರೆ. ಶ್ರವಣದಲ್ಲಿ ಆಸಕ್ತರಾದ ಅವರು ಕೂಡ ಕ್ರಮಶಃ ಹುಟ್ಟು ಸಾವನ್ನು ದಾಟಿಯೇ ದಾಟುತ್ತಾರೆ.

ಯಾವತ್ಸಂಜಾಯತೇ ಕಿಂಚಿತ್
ಸತ್ತ್ವಂ ಸ್ಥಾವರಜಂಗಮಮ್ ।
ಕ್ಷೇತ್ರಕ್ಷೇತ್ರಜ್ಞ ಸಂಯೋಗಾತ್
ತದ್ವಿದ್ಧಿ ಭರತರ್ಷಭ ॥ 26

ಅರ್ಜುನ, ಸ್ಥಿರವಾಗಲಿ, ಚರವಾಗಲಿ ಯಾವ ಯಾವ ವಸ್ತು ಹುಟ್ಟುತ್ತದೋ ಅದೆಲ್ಲ ಪ್ರಕೃತಿ–ಪುರುಷರ ಸಂಬಂಧದಿಂದ ಆದದ್ದೆಂದು ತಿಳಿ.

ಸಮಂ ಹಿ ಸರ್ವೇಷು ಭೂತೇಷು
ತಿಷ್ಠಂತಂ ಪರಮೇಶ್ವರಮ್।
ವಿನಶ್ಯತ್ಸ್ವವಿನಶ್ಯಂತಂ
ಯಃ ಪಶ್ಯತಿ ಸ ಪಶ್ಯತಿ ॥ 27

ಎಲ್ಲ ಪ್ರಾಣಿಗಳಲ್ಲಿಯೂ ಸಮಾನವಾಗಿರುವ, ಅವು ನಾಶವಾದರೂ ತಾನು ನಾಶವಾಗದೆ ಇರುವ ಭಗವಂತನನ್ನು ಕಾಣುವವನೇ ನಿಜವಾದ ಜ್ಞಾನಿ.

ಸಮಂ ಪಶ್ಯನ್ ಹಿ ಸರ್ವತ್ರ
ಸಮವಸ್ಥಿತಮೀಶ್ವರಮ್ ।
ನ ಹಿನಸ್ತ್ಯಾತ್ಮನಾತ್ಮಾನಂ
ತತೋ ಯಾತಿ ಪರಾಂ ಗತಿಮ್ ॥ 28

ಎಲ್ಲ ಪ್ರಾಣಿಗಳಲ್ಲಿಯೂ ಒಂದೇ ರೀತಿ ಇರುವ ಭಗವಂತನನ್ನು ನೋಡಿದವನು ತನ್ನನ್ನು ತಾನು ಪಾಪದ ಹಿಂಸೆಯಿಂದ ಪಾರಾಗಿಸುತ್ತಾನೆ. ಅದ್ದರಿಂದ ಅವನು ಉತ್ತಮಗತಿಯನ್ನು ಹೊಂದುತ್ತಾನೆ.

ಪ್ರಕೃತ್ಯೈವ ಚ ಕರ್ಮಾಣಿ
ಕ್ರಿಯಮಾಣಾನಿ ಸರ್ವಶಃ ।
ಯಃ ಪಶ್ಯತಿ ತಥಾತ್ಮಾನಂ
ಅಕರ್ತಾರಂ ಸ ಪಶ್ಯತಿ ॥ 29

ಎಲ್ಲ ಕ್ರಿಯೆಗಳೂ ಭಗವಂತನ ಇಚ್ಛಾಶಕ್ತಿಯಂತೆ ನಡೆಯುವವುಗಳೆಂದೂ ತಾನು ಕರ್ತಾರನಲ್ಲವೆಂದೂ ತಿಳಿದುಕೊಂಡವನು ನಿಜವಾದ ಜ್ಞಾನಿ.

ಯದಾ ಭೂತಪೃಥಗ್ಭಾವಂ
ಏಕಸ್ಥಮನುಪಶ್ಯತಿ ।
ತತ ಏವ ಚ ವಿಸ್ತಾರಂ
ಬ್ರಹ್ಮ ಸಂಪದ್ಯತೇ ತದಾ ॥ 30

ಈ ಎಲ್ಲ ಸೃಷ್ಟಿ ಒಬ್ಬನೇ ಆದ ಭಗವಂತನಲ್ಲಿ ನೆಲೆಗೊಂಡಿದೆಯೆಂದೂ, ಅವನಿಂದಲೆ ಹೊರಹೊಮ್ಮಿ ವೈವಿಧ್ಯವನ್ನು ಪಡೆವುದೆಂದೂ, ತಿಳಿದವನು ಭಗವಂತನನ್ನೇ ಸೇರುತ್ತಾನೆ.

ಅನಾದಿತ್ವಾನ್ನಿರ್ಗುಣತ್ವಾತ್
ಪರಮಾತ್ಮಾಯಮವ್ಯಯಃ ।
ಶರೀರಸ್ಥೋಽಪಿ ಕೌಂತೇಯ
ನ ಕರೋತಿ ನ ಲಿಪ್ಯತೇ ॥ 31

ಅರ್ಜುನ, ಈ ಪರಮಾತ್ಮನು ಮೊದಲೆಂಬುದಿಲ್ಲದವನಾದ್ದರಿಂದಲೂ, ಗುಣಗಳ ಸಂಬಂಧವಿಲ್ಲದವನಾದ್ದರಿಂದಲೂ, ನಾಶವನ್ನು ಪಡೆಯದಿರುವನು. ಇವನು ಶರೀರದೊಳಗಿದ್ದೂ ಏನನ್ನೂ ಮಾಡುವುದಿಲ್ಲ ಮತ್ತು ಯಾವ ಫಲವನ್ನೂ ಅಂಟಿಸಿಕೊಳ್ಳುವುದಿಲ್ಲ.

ಯಥಾ ಸರ್ವಗತಂ ಸೌಕ್ಷ್ಮ್ಯಾತ್
ಆಕಾಶಂ ನೋಪಲಿಪ್ಯತೇ ।
ಸರ್ವತ್ರಾವಸ್ಥಿತೋ ದೇಹೇ
ತಥಾತ್ಮಾ ನೋಪಲಿಪ್ಯತೇ ॥ 32

ಎಲ್ಲೆಲ್ಲಿಯೂ ತುಂಬಿರುವ ಆಕಾಶವು ಸೂಕ್ಷ್ಮವಾದ್ದರಿಂದ ಹೇಗೆ ಸೋಂಕನ್ನು ಪಡೆಯುವುದಿಲ್ಲವೋ ಹಾಗೆ ದೇಹಗಳಲ್ಲೆಲ್ಲಿಯೂ ಇರುವ ಪರಮಾತ್ಮನು ಯಾವ ಸೋಂಕನ್ನೂ ಪಡೆಯುವುದಿಲ್ಲ.

ಯಥಾ ಪ್ರಕಾಶಯತ್ಯೇಕಃ
ಕೃತ್ಸ್ನಂ ಲೋಕಮಿಮಂ ರವಿಃ ।
ಕ್ಷೇತ್ರಂ ಕ್ಷೇತ್ರೀ ತಥಾ
ಕೃತ್ಸ್ನಂ ಪ್ರಕಾಶಯತಿ ಭಾರತ ॥ 33

ಅರ್ಜುನ, ಒಬ್ಬನೇ ಸೂರ್ಯನು ಹೇಗೆ ಈ ಎಲ್ಲ ಲೋಕಗಳನ್ನೂ ಬೆಳಗುತ್ತಾನೋ ಹಾಗೆ ಭಗವಂತನು ಈ ಕ್ಷೇತ್ರವನ್ನೆಲ್ಲ ಬೆಳಗುವನು.

ಕ್ಷೇತ್ರಕ್ಷೇತ್ರಜ್ಞಯೋರೇವಂ
ಅಂತರಂ ಜ್ಞಾನಚಕ್ಷುಷಾ ।
ಭೂತಪ್ರಕೃತಿಮೋಕ್ಷಂ ಚ
ಯೇ ವಿದುರ್ಯಾಂತಿ ತೇ ಪರಮ್ ॥ 34

ಕ್ಷೇತ್ರ–ಕ್ಷೇತ್ರಜ್ಞರ ಅಂತರವನ್ನೂ ಭೌತಿಕ ಪ್ರಪಂಚದಿಂದ, ಮೂಲ ಪ್ರಕೃತಿಯ ಬಂಧದಿಂದ ಬಿಡುಗಡೆಗೆ ಕಾರಣವಾದ ಜ್ಞಾನಮಾರ್ಗವನ್ನು ತಿಳಿವುಗಣ್ಣಿನಿಂದ ತಿಳಿದುಕೊಂಡವರು ಭಗವಂತನನ್ನೇ ಸೇರುತ್ತಾರೆ.

ಇತಿ

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಕ್ಷೇತ್ರಕ್ಷೇತ್ರಜ್ಞವಿಭಾಗಯೋಗೋ ನಾಮ ತ್ರಯೋದಶೋಽಧ್ಯಾಯಃ ॥

13ನೆಯ ಅಧ್ಯಾಯವು ಮುಗಿದುದು.

---




## ವೈಷ್ಣವ ಧರ್ಮ ದರ್ಶನ

ಲೇಖಕರು : ಎಚ್.ಜಿ. ರಾಮಯ್ಯಂಗಾರ್,

ಪ್ರಕಾಶಕರು : ಆದರ್ಶ ಶಿಕ್ಷಣ ಮತ್ತು ಸಮಾಜ ಸೇವಾ ಟ್ರಸ್ಟ್,

ನಂ. 67, 15 ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು 560055.

ಪುಟಗಳು : 8+256  ಬೆಲೆ : ರೂ. 35–00

ವೈಷ್ಣವ ಧರ್ಮ ಅಥವಾ ಭಾಗವತ ಧರ್ಮದ ಸ್ಥೂಲಸ್ವರೂಪವನ್ನು ವಿವರಿಸುತ್ತ ಭಾಗವತೋತ್ತಮರ ಪುಣ್ಯ ಚರಿತೆಯೊಂದಿಗೆ ಪ್ರಕಟವಾಗಿರುವ ಈ ಕೃತಿ 264 ಪುಟಗಳಿಂದ ಕೂಡಿದೆ. ಭಾಗವತೋತ್ತಮರು, ಆಚಾರ್ಯರು, ಸಾಧು ಸಂತರು ನೀಡಿರುವ 'ಸಂಸ್ಕೃತಿ ಪ್ರಧಾನವಾದ ಸುಜ್ಞಾನವನ್ನು' ಜನತೆಗೆ ನೀಡುವ ಉದ್ದೇಶದಿಂದ ಲೇಖಕ ಶ್ರೀ ಎಚ್. ಜಿ. ರಾಮಯ್ಯಂಗಾರ್‌ರವರು ಈ ಕೃತಿಯನ್ನು ರಚಿಸಿದ್ದಾರೆ.

## ಓದಲೇ ಬೇಕಾದ ಕೃತಿ

# ವೈಷ್ಣವ ಧರ್ಮ ದರ್ಶನ

ವಿಶಾಲಾರ್ಥದಲ್ಲಿ ದರ್ಶನದ ಅರ್ಥ ಸ್ವರೂಪ ಮತ್ತು ಗುರಿಯನ್ನು, ವಿಜ್ಞಾನ ನಿಷ್ಠ ಆಧ್ಯಾತ್ಮದ ಅವಶ್ಯಕತೆಯನ್ನು ಮಾನವನ ಉಗಮ ಮತ್ತು ಪ್ರಗತಿಯನ್ನು ವೈಷ್ಣವ ಧರ್ಮದ ಭಕ್ತಿಪಂಥವನ್ನು ಭಾರತೀಯ ಭಾಷೆಗಳಲ್ಲಿರುವ ವಿಷ್ಣುಭಕ್ತಿ ಸಾಹಿತ್ಯವನ್ನು, ಭಕ್ತಿ ಸಾಹಿತ್ಯ ಗ್ರಂಥಗಳ ಗರಿಮೆಯನ್ನು, ವೈಷ್ಣವ ದೇವಾಲಯಗಳನ್ನು, ಪ್ರಮುಖ ವೈಷ್ಣವ ಕ್ಷೇತ್ರಗಳನ್ನು, ವೈಷ್ಣವ ಪ್ರಾರ್ಥನೆಗಳನ್ನು, ವೈಷ್ಣವ ಧರ್ಮದ ಪ್ರತಿಭಾನ್ವಿತ ಪ್ರತಿನಿಧಿಗಳನ್ನು ಕುರಿತು ವಿವರಿಸುವ ವಿಷಯಗಳನ್ನೊಳಗೊಂಡ ಹತ್ತು ಅಧ್ಯಾಯಗಳಲ್ಲಿ ಹರಡಿಕೊಂಡಿದೆ ಈ ಗ್ರಂಥ.

ಕಲೆಯ ಉಗಮ ಧರ್ಮದಿಂದ, ಧರ್ಮದ ಉದ್ದೇಶ ಸಂಸ್ಕರಣ ಮತ್ತು ನೆಮ್ಮದಿಗಾಗಿ. ಧರ್ಮದ ತಳಹದಿಯ ಮೇಲೆ ವಿಜ್ಞಾನದ ಉಗಮ, ಧರ್ಮ ಹಾಗೂ ವಿಜ್ಞಾನಕ್ಕಿರುವ ಸಾಮ್ಯ, ಮಾನವನ ವಿಕಾಸಕ್ಕೆ ಧರ್ಮದ ಅಗತ್ಯ, ಮುಕ್ತಿಗೆ ಸೋಪಾನದಂತಿರುವ ನವವಿಧ ಭಕ್ತಿ, ಲೋಕಪ್ರಿಯವಾದ ಭಕ್ತಿಮಾರ್ಗದ ಶ್ರೇಷ್ಠತೆ, ಧರ್ಮದೀಪವನ್ನು ಬೆಳಗಿಸಲು ಪೂರಕವಾಗಿರುವ ವಿಷ್ಣುಭಕ್ತಿ ಸಾಹಿತ್ಯ, ಬಾಳಿಗೆ ದಾರಿದೀಪವಾಗಿರುವ ಧರ್ಮದೀಪಕರ ಪುಣ್ಯ ಜೀವನ, ಸಂದೇಶಗಳನ್ನು ವಿವರಿಸುವ ಭಾಗಗಳು ನೇರವಾಗಿ, ಹೃದ್ಯವಾಗಿ ನಿರೂಪಿತವಾಗಿರುವುದನ್ನು ಈ ಗ್ರಂಥದಲ್ಲಿ ಕಾಣಬಹುದು.

ಭಾರತೀಯ ಸಂಸ್ಕೃತಿಯ ಜೀವರೂಪದಂತಿರುವ ಧರ್ಮದ ವಿರಾಟ್ ಸ್ವರೂಪವನ್ನು ಅಡಕಗೊಳಿಸಿ, ಸಾಮಾನ್ಯರನ್ನು ಕೃತಿಯು ತಲುಪುವಂತೆ ಲೇಖಕರು ಯತ್ನಿಸಿದ್ದಾರೆ. ಈ ಯತ್ನದಲ್ಲಿ ಸಾಫಲ್ಯವನ್ನು ಪಡೆದಿದ್ದಾರೆ. ಧರ್ಮ ಬೀರುಗಳು ಓದಲೇ ಬೇಕಾದ ಕೃತಿಯಿದು.

**– ಕೆ. ಎಸ್. ರಾಮಮೂರ್ತಿ**

# ತಿರುಪತಿಯಲ್ಲಿ ಲಾಡು

ತಿರುಮಲೆಯಲ್ಲಿನ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಹಾಗೂ ದೇವಾಲಯದ ಎದುರಿಗಿನ ಬ್ಯಾಂಕ್‌ನಲ್ಲಿ ಮಾತ್ರವೇ ದೊರೆಯುತ್ತಿದ್ದ ಶ್ರೀ ವೆಂಕಟೇಶ್ವರಸ್ವಾಮಿಯ ಪ್ರಸಾದವಾದ ಲಾಡು ಈಗ ತಿರುಪತಿಯಲ್ಲೂ ದೊರೆಯುವಂತೆ ಯೋಜಿಸಲಾಗಿದೆ. ತಿರುಪತಿಯ ಶ್ರೀ ಗೋವಿಂದರಾಜ ಸ್ವಾಮಿ ದೇವಾಲಯದಲ್ಲಿ ಈ ಲಾಡು ವಿಕ್ರಯಕ್ಕಾಗಿಯೇ ಪ್ರತ್ಯೇಕವಾಗಿ ಉಂಟು ಮಾಡಿರುವ ಕೌಂಟರಿನಲ್ಲಿ ಯಾತ್ರಿಕರು ಕೊಳ್ಳಬಹುದು.

ಕೌಂಟರ್ ಕೆಲಸ ಮಾಡುವ ಕಾಲ : ಬೆ. 6 ರಿಂದ 7 ವರೆಗೆ<br>
ಬೆ. 9 ರಿಂದ 12 ವರೆಗೆ<br>
ಮ. 3 ರಿಂದ ಸಂ. 7 ವರೆಗೆ

ಬೆಲೆ: ರೂ. 3—00 (ಪ್ರತಿ ಲಾಡು)

# ಕಿಶೋರ ಜಗತ್



# ಗುರುಭಕ್ತ ಉಪಮನ್ಯು

ಪುರಾಣ ಪ್ರಸಿದ್ಧರಾದ ಮಹರ್ಷಿ ಧೌಮ್ಯರು ತಪಸ್ಸು, ಔದಾರ್ಯ, ವೇದಶಾಸ್ತ್ರಾಧ್ಯಯನಗಳಿಂದ ಪ್ರಸಿದ್ಧರಾಗಿದ್ದರು. ಅನೇಕ ಮಂದಿ ಶಿಷ್ಯರು ಆಶ್ರಮವಾಸಿಗಳಾಗಿದ್ದು ಗುರುಸೇವೆಮಾಡಿ ವಿದ್ಯಾರ್ಜನೆ ಮಾಡುತ್ತಿದ್ದರು. ಗುರುಗಳಾದ ಧೌಮ್ಯರು ಶಿಷ್ಯರ ಕುರಿತು ಹೊರಗಣಿಂದ ಕಾಣಲು ಕಠೋರರಾಗಿದ್ದರೂ, ಅಂತರಂಗದಲ್ಲಿ ಬಹಳ ಸ್ನೇಹಪರರಾಗಿದ್ದರು, ತಮ್ಮ ಶಿಷ್ಯರು ಉತ್ತಮಜ್ಞಾನಿಗಳೂ ಸಂಸ್ಕೃತಿಸಂಪನ್ನರೂ ವಿನೀತರೂ ವಿಧೇಯರೂ ಆಗುವಂತೆ ಬೋಧಿಸುತ್ತಿದ್ದರು. ಜ್ಞಾನಪಿಪಾಸುಗಳಾದ ಶಿಷ್ಯರು ಗುರುಗಳ ಆದೇಶದಂತೆ ಶ್ರದ್ಧೆಯಿಂದ ಜ್ಞಾನಾರ್ಜನೆ ಮಾಡುತ್ತಿದ್ದರು.

ಧೌಮ್ಯರ ಶಿಷ್ಯರಲ್ಲಿ 'ಉಪಮನ್ಯು' ಹೆಸರಿನ ಬಾಲಕನು ತನ್ನ ಉತ್ತಮಗುಣನಡತೆಗಳಿಂದ ಗುರುವಿನ ಪ್ರೀತಿಗೆ ಪಾತ್ರನಾಗಿದ್ದನು. ಗುರುಗಳು ಆತನಲ್ಲಿ ತಮಗಿರುವ ಪ್ರೀತಿಯನ್ನು ತೋರಿಸದೆ ಆತನನ್ನು ಇನ್ನೂ ಉತ್ತಮನಾಗಿ ಮಾಡಬೇಕೆಂದು ಬಯಸಿದ್ದರು. ಗುರುಗಳು ಮಾತಿನಲ್ಲಿ ಕೃತಿಯಲ್ಲಿ ಪ್ರೀತಿ ತೋರಿಸದಿರುವುದನ್ನು ಕಂಡ ಉಪಮನ್ಯು ಮತ್ತಷ್ಟು ವಿಧೇಯನಾಗಿ ಹೇಳಿದ ಕೆಲಸಗಳನ್ನು ಶ್ರದ್ಧೆಯಿಂದ ಮಾಡುತ್ತಿದ್ದನು.

ಹೀಗಿರಲು ಧೌಮ್ಯರು ಉಪಮನ್ಯುವಿನ ಗುರುಭಕ್ತಿಯನ್ನು ಪರೀಕ್ಷಿಸಲಿಕ್ಕಾಗಿ ಆತನನ್ನು ಆಶ್ರಮದ ದನಗಳನ್ನು ಮೇಯಿಸುವ ಕೆಲಸಕ್ಕೆ ನೇಮಿಸಿದರು. ಗುರುಗಳ ಆಜ್ಞೆಯಂತೆ ದನಗಳನ್ನು ಆಶ್ರಮದ ಬಳಿಯ ವನಕ್ಕೆ ಅಟ್ಟಿಕೊಂಡು ಹೋಗಿ ಹಗಲಿಡೀ ಮೇಯಿಸಿ ಸಂಜೆಗೆ ಮರಳುತ್ತಿದ್ದನು. ಮಧ್ಯಾಹ್ನದ ಊಟಕ್ಕೆ ಆತನು ಬುತ್ತಿ ಕೊಂಡೊಯ್ಯುತ್ತಿರಲಿಲ್ಲ. ಆತನನ್ನು ಪರೀಕ್ಷಿಸುವುದಕ್ಕಾಗಿಯೇ ಬುತ್ತಿ ಕೊಂಡುಹೋಗಲು ಗುರುಗಳು ಹೇಳಿರಲಿಲ್ಲ.

ಹೀಗೆ ಕೆಲದಿನ ಕಳೆಯಲು ಒಂದು ದಿನ ಸಂಜೆ ಗುರುಗಳು ಆಶ್ರಮಕ್ಕೆ ಮರಳಿದ ಉಪಮನ್ಯುವನ್ನು ಬಳಿಗೆ ಕರೆದು 'ಮಗು ಉಪಮನ್ಯು, ನೀನು ಮಧ್ಯಾಹ್ನ ಊಟಕ್ಕೆ ಏನುಮಾಡುತ್ತಿ ?' ಎಂದು ಕೇಳಿದರು. ಉಪಮನ್ಯು "ಗುರುಗಳೇ, ಭಿಕ್ಷೆಬೇಡಿ ಉಣ್ಣುತ್ತೇನೆ"– ನಮ್ರತೆಯಿಂದ ಉತ್ತರಿಸಿದನು. ಗುರುಗಳು "ಮಗು, ಬ್ರಹ್ಮಚಾರಿಯಾದವನು ಬೇಡಿ ಸಿಕ್ಕಿದ ಭಿಕ್ಷಾನ್ನವನ್ನು ಗುರುವಿಗೊಪ್ಪಿಸಬೇಕು, ಗುರುಗಳು ಕೊಟ್ಟರೆ ಮಾತ್ರ ಅದನ್ನು ಸ್ವೀಕರಿಸಬೇಕು" ಎಂದು ಅಪ್ಪಣೆ ಇತ್ತರು. ಅಂದಿನಿಂದ ಉಪಮನ್ಯು ದೊರೆತ ಭಿಕ್ಷಾನ್ನವನ್ನು ಗುರುಗಳಿಗೊಪ್ಪಿಸತೊಡಗಿದನು. ಶಿಷ್ಯನನ್ನು ಪರೀಕ್ಷಿಸಲು ಗುರುಗಳು ಅವನಿಗೆ ಸ್ವಲ್ಪವೂ ಕೊಡದೆ ಸಂಪೂರ್ಣ ಇರಿಸಿಕೊಳ್ಳತೊಡಗಿದರು.

ಕೆಲದಿನಗಳು ಉರುಳಿದುವು. ಉಪಮನ್ಯು ಎಂದಿನಂತೆ ತನ್ನ ಕೆಲಸವನ್ನು ಶ್ರದ್ಧೆಯಿಂದ ಮಾಡಿ ಸಂಜೆಗೆ ಆಶ್ರಮಕ್ಕೆ ಮರಳುತ್ತಿದ್ದನು. ಒಂದು ದಿನ ಗುರುಗಳು ಕೇಳಿದರು, "ಉಪಮನ್ಯು ಈಗ ನೀನು ಊಟಕ್ಕೆ ಏನು ಮಾಡುತ್ತಿ ?" ಉಪಮನ್ಯು, "ಗುರುದೇವ, ಮತ್ತೊಮ್ಮೆ ಭಿಕ್ಷೆ ಬೇಡಿ ಜೀವಿಸುತ್ತೇನೆ" ಉತ್ತರಿಸಿದನು. ಗುರುಗಳು "ಎರಡನೆಬಾರಿ ಭಿಕ್ಷೆಬೇಡುವುದು ಧರ್ಮವಿರುದ್ಧ. ಆದ್ದರಿಂದ ನೀನು ಎರಡನೆಬಾರಿ ಭಿಕ್ಷೆ ಬೇಡಬಾರದು" ಕಟ್ಟಪ್ಪಣೆ ಇತ್ತರು. ಗುರುಗಳ ಆಜ್ಞೆಯಂತೆ ಉಪಮನ್ಯು ಎರಡನೆಬಾರಿ ಭಿಕ್ಷೆ ಬೇಡುವುದನ್ನು ನಿಲ್ಲಿಸಿಬಿಟ್ಟು, ಮೊದಲನೆಬಾರಿಯ ಭಿಕ್ಷೆಯನ್ನು ಗುರುಗಳಿಗೆ ಒಪ್ಪಿಸಿ ತನ್ನ ಕಾರ್ಯವನ್ನು ತಪ್ಪದೆ ಮಾಡುತ್ತಿದ್ದನು.

ಕೆಲದಿನ ಕಳೆಯಲು ಗುರುಗಳು ಪುನಃ ಕೇಳಿದಾಗ ತಾನು ದನಗಳ ಹಾಲು ಕರೆದು ಕುಡಿದು ಬದುಕುತ್ತೇನೆ ಎಂದನು. ಆಗ ಗುರುಗಳು "ಇದು ಸರಿಯಲ್ಲ; ದನಗಳು ನನ್ನವುಗಳಾದ ಕಾರಣ ನನ್ನೊಡನೆ ಕೇಳದೆ ಅವುಗಳ ಹಾಲನ್ನು ಕರೆದು ಕುಡಿಯಬಾರದು". ಎಂದು ಆಜ್ಞಾಪಿಸಿದರು. ಉಪಮನ್ಯು, 'ತಪ್ಪಾಯಿತು, ಕ್ಷಮಿಸಬೇಕು' ಎಂದು ಅಂದಿನಿಂದ ಹಾಲು ಕುಡಿಯುವುದನ್ನೂ ಬಿಟ್ಟನು. ಆದರೂ ಉಪಮನ್ಯು ಎಂದಿನಂತೆ ದನಗಳನ್ನು ಮೇಯಿಸುತ್ತಿದ್ದನು.

ದಿನಗಳ ಮೇಲೆ ದಿನಗಳು ಕಳೆಯಲು ಧೌಮ್ಯರು ಶಿಷ್ಯನನ್ನು ಕರೆದು ಕೇಳಿದರು "ಉಪಮನ್ಯು, ನಿನ್ನ ದೇಹ ಏನೂ ಕ್ಷೀಣಿಸಿಲ್ಲ, ಏನು ತಿನ್ನುತ್ತಿ ಈಗ ?" ಉಪಮನ್ಯು, "ಗುರುಗಳೇ, ಸತ್ಯ ಹೇಳುತ್ತೇನೆ, ನಾನೀಗ ಕರುಗಳ ಬಾಯಿಂದ ಸುರಿಯುವ ನೊರೆಯನ್ನು ಕುಡಿದು ಬದುಕುತ್ತೇನೆ"–ವಿನಮ್ರನಾಗಿ ನುಡಿದನು. ಗುರುಗಳು "ಕರುಗಳು ತಾವು ಹಸಿದಿದ್ದು ನೊರೆ ಸುರಿಸಬಹುದು; ಅದನ್ನು ನೀನು ಕುಡಿದರೆ ಕರುಗಳಿಗೆ ಹಸಿವಾದೀತು. ಆದುದರಿಂದ ಅವುಗಳ ನೊರೆಯನ್ನು ಕುಡಿಯದಿರು" ಎಂದರು.

ಗುರುಗಳ ಆಜ್ಞೆಯನ್ನು ಶಿರಸಾವಹಿಸಿದ ಉಪಮನ್ಯು ಅಂದಿನಿಂದ ಏನೂ ತಿನ್ನದೆ ಉಪವಾಸವಿದ್ದೂ ಶ್ರದ್ಧೆಯಿಂದ ಕಾರ್ಯನಿರತನಾಗಿದ್ದನು. ಹಸಿವೆಯನ್ನು ತಡೆಯದಾದಾಗ ಎಕ್ಕದ ಎಲೆಗಳನ್ನು ತಿನ್ನುತ್ತಿದ್ದನು. ಎಕ್ಕದ ಎಲೆಗಳ ವಿಷದಿಂದ ಅವನ ದೃಷ್ಟಿ ಮಂದವಾಯಿತು. ದಿನದಿಂದ ದಿನಕ್ಕೆ ಕಣ್ಣು ಕಾಣಿಸದಾಯಿತು. ಆದರೂ ಗುರುಗಳ ಆಜ್ಞೆಯನ್ನು ಮೀರದೆ ದನಗಳ ಚಲನವಲನಗಳ ಸದ್ದನ್ನು ಆಲಿಸಿ ಅವುಗಳನ್ನು ಹಿಂಬಾಲಿಸುತ್ತಿದ್ದನು.

ಹೀಗೆ ಕಣ್ಣು ಕಾಣಿಸದಾಗಲು ಒಂದು ದಿನ ಉಪಮನ್ಯು ದನಗಳನ್ನು ಹಿಂಬಾಲಿಸುತ್ತಿದ್ದಾಗ ದಾರಿಯ ಬದಿಯಿದ್ದ ಬಾವಿಗೆ ಬಿದ್ದನು. ದನಗಳು ಆಶ್ರಮಕ್ಕೆ ಬಂದರೂ ಉಪಮನ್ಯು ಬಾರದಿರಲು ಗುರುಗಳು ಚಿಂತಾಸಕ್ತರಾಗಿ ಉಪಮನ್ಯುವನ್ನು ಹುಡುಕಲು ಹೊರಟರು.

ಕತ್ತಲಾಯಿತು, ಧೌಮ್ಯರು "ಉಪಮನ್ಯು ; ಉಪಮನ್ಯು, ಎಲ್ಲಿದ್ದಿ ?'' ಎಂದು ಗಟ್ಟಿಯಾಗಿ ಕೂಗಿ ಕರೆಯುತ್ತಾ ಮುಂದೆ ಮುಂದೆ ಹೋದರು. ಬಾವಿಯಲ್ಲಿದ್ದ ಉಪಮನ್ಯುವಿಗೆ ಗುರುಗಳ ಕರೆ

**ಶ್ರೀ ಎಸ್. ತಿರುಮಲೇಶ್ವರ ಭಟ್ಟ**

ಕೇಳಿಸಿತು. ಬಾವಿಯಲ್ಲಿ ನೀರಿದ್ದಿಲ್ಲ. ಉಪಮನ್ಯುವಿಗೆ ಏನೂ ಅಪಾಯವಾಗಿರಲಿಲ್ಲ. ಗುರುಗಳ ಕರೆ ಕೇಳಿದ ಉಪಮನ್ಯು 'ಗುರುದೇವ, ನಾನಿಲ್ಲಿ ಬಾವಿಯಲ್ಲಿ ಬಿದ್ದಿದ್ದೇನೆ' ಎಂದು ಬಾವಿಯೊಳಗಿಂದ ಉತ್ತರಿಸಿದನು.

ಶಿಷ್ಯನ ಸ್ವರಕೇಳಿದ ಧೌಮ್ಯರಿಗೆ ಜೀವ ಬಂದಂತಾಯಿತು. ಸ್ವರ ಕೇಳಿದ ಕಡೆಗೆ ಓಡೋಡಿ ಬಂದು ಬಾವಿಗೆ ಇಣಿಕಿನೋಡಿದರು. ಕರೆದು ವಿಚಾರಿಸಿದಾಗ ಉಪಮನ್ಯು ಕುರುಡನಾಗಿದ್ದ ಅರಿವಾಯಿತು. ಗುರ್ವಾಜ್ಞೆಯಂತೆ ಆಹಾರವಿಲ್ಲದೆ ಅನಿವಾರ್ಯವಾಗಿ ಎಕ್ಕದ ಎಲೆ ತಿಂದಕಾರಣದಿಂದ ಕಣ್ಣು ಕಾಣಿಸದಾದುದನ್ನು ತಿಳಿದ ಗುರುಗಳು ಚಿಂತಾಕ್ರಾಂತರಾದರು. ಶಿಷ್ಯನ ಗುರುಭಕ್ತಿ, ಶ್ರದ್ಧೆ, ನಿಷ್ಠೆಗಳಿಗೆ ಮೆಚ್ಚಿದ ಗುರುಗಳು ಶಿಷ್ಯನ ಅಂಧತ್ವನಿವಾರಣೆಗಾಗಿ ಋಗ್ವೇದದ ಮಂತ್ರಗಳಿಂದ ಅಶ್ವಿನೀದೇವತೆಗಳನ್ನು ಸ್ತುತಿಸುವಂತೆ ಹೇಳಿದರು.

ಗುರುಗಳ ಅಪ್ಪಣೆಯಂತೆ ಉಪಮನ್ಯು ಸ್ವರಯುಕ್ತವಾಗಿ ಶ್ರದ್ಧೆಯಿಂದ ಸ್ತುತಿಸಲು ಅಶ್ವಿನೀದೇವತೆಗಳು ಬಾವಿಯೊಳಗೆ ಪ್ರತ್ಯಕ್ಷರಾಗಿ ಉಪಮನ್ಯುವಿನ ಕಣ್ಣುಗಳ ಮೇಲೆ ಕೈಯಾಡಿಸಿ ಅಂಧತ್ವನಿವಾರಣೆಮಾಡಿ ತಿನ್ನಲು ಒಂದು ಫಲವನ್ನು ಕೊಟ್ಟರು. ಆಗ ಉಪಮನ್ಯು 'ಗುರುಗಳ ಅಪ್ಪಣೆ ಇಲ್ಲದೆ ತಾನು ತೆಗೆದುಕೊಳ್ಳುವಂತಿಲ್ಲ, ಎಂದನು. ಅಶ್ವಿನೀದೇವತೆಗಳು "ಬಾಲಕ, ಸಂಕೋಚಪಡದಿರು, ನಿನ್ನ ಗುರುಗಳೇ ಹಿಂದೆ ನಾವು ಕೊಟ್ಟ ಫಲವನ್ನು ಗುರುಗಳಿಗೆ ಅರ್ಪಿಸದೆ ತಿಂದಿರುವರು. ಆದಕಾರಣ ಹೆದರಬೇಡ, ತೆಗೆದುಕೊ" ಒತ್ತಾಯಿಸಿದರು.

ಉಪಮನ್ಯು–'ಪ್ರಭುಗಳೇ, ನನ್ನನ್ನು ನೀವೂ ಪರೀಕ್ಷಿಸುವಿರಾ? ಗುರುಗಳು ಏನೇ ಮಾಡಲಿ ಅವರು ನನ್ನ ಗುರುಗಳಾದ ಕಾರಣ ಅವರ ಆಜ್ಞೆಯಿಲ್ಲದೆ ತಿನ್ನಲಾರೆ,' ಎಂದು ದೈನ್ಯದಿಂದ ಬೇಡಿಕೊಂಡನು. ಉಪಮನ್ಯುವಿನ ಗುರುಭಕ್ತಿಗೆ ಪ್ರಸನ್ನರಾದ ಅಶ್ವಿನೀದೇವತೆಗಳು ಅವನಿಗೆ ಸಕಲ ವಿದ್ಯೆಗಳೂ ಕಲಿಯದೆ ಕರತಲಾಮಲಕವಾಗುವಂತೆ ವರಕೊಟ್ಟು ಹರಸಿದರು. ಉಪಮನ್ಯು ಸಾಷ್ಟಾಂಗ ವಂದಿಸಿ ಎದ್ದು ಕಣ್ತೆರೆದು ನೋಡುವಷ್ಟರಲ್ಲಿ ಅಶ್ವಿನೀದೇವತೆಗಳು ಅದೃಶ್ಯರಾಗಿದ್ದರು.

ಇದನ್ನೆಲ್ಲ ಮಹರ್ಷಿ ಧೌಮ್ಯರು ಮೇಲೆ ನಿಂತು ನೋಡುತ್ತಿದ್ದರು. ಬಳಿಕ ಉಪಮನ್ಯು ಬಾವಿಯಿಂದ ಮೇಲೆ ಬಂದು ಗುರುಗಳಿಗೆ ಸಾಷ್ಟಾಂಗ ವಂದಿಸಿದನು. ಕಠಿನತರ ಕಷ್ಟಗಳಿಗೆ ಗುರಿಪಡಿಸಿದರೂ ನಿಶ್ಚಲಗುರುಭಕ್ತಿಯಿಂದ ಅವೆಲ್ಲವನ್ನೂ ಸಹಿಸಿ, ಕಠಿನಪರೀಕ್ಷೆಯಲ್ಲಿ ಉತ್ತೀರ್ಣನಾದ ತನ್ನ ಪ್ರಿಯಶಿಷ್ಯನ ಗುರುಭಕ್ತಿಗೆ ಮೆಚ್ಚಿದ ಮಹರ್ಷಿ ಧೌಮ್ಯರು ಉಪಮನ್ಯುವಿನ ಕೈಹಿಡಿದು ಮೇಲೆತ್ತಿ 'ಚಿರಂಜೀವಿಯಾಗು' ಎಂದು ಹರಸಿ ಆಲಿಂಗಿಸಿದರು.

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ
ಗುರುಃ ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ"

★

## ಗ್ರಂಥಾಂತರಂಗ

# ಸ್ವರ್ಣೋತ್ಸವ ಸಂಪುಟ

**ಸ್ವರ್ಣೋತ್ಸವ ಸಂಪುಟ**

ಪುಟಗಳು: 496+32

ಬೆಲೆ: ರೂ. 25–00

ಪ್ರತಿಗಳಿಗಾಗಿ:

ವೆಲ್‌ಫೇರ್ ಆಫೀಸರ್,
ಸೇಲ್ಸ್‌ವಿಂಗ್
ತಿ. ತಿ. ದೇ. ತಿರುಪತಿ.

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ವ್ಯವಸ್ಥೆಯ ಐವತ್ತು ವರ್ಷಗಳ ಯಶಸ್ವಿ ನಿರ್ವಹಣೆಯ ನೆನಪಿನಲ್ಲಿ ಹೊರಬಂದಿರುವ ಪುಸ್ತಕ ಸ್ವರ್ಣೋತ್ಸವ ಸಂಪುಟ. ಸ್ವರ್ಣೋತ್ಸವ ಆಚರಣೆಯ ಅಂಗವಾ 22 ಎಪ್ರಿಲ್ 1984 ರಂದು ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರ ಧರ್ಮಪತ್ನಿ ಶ್ರೀಮತಿ ಬಸವತಾರಕಂ ಅವರು ಬಿಡುಗಡೆ ಮಾಡಿದರು.

500 ಪುಟಗಳಲ್ಲಿ ಹರಡಿದ ಈ ಕೃತಿಯ ಮೇಲು ನೋಟದ ಮುಖ್ಯ ಅಂಶವೆಂದರೆ ಇಲ್ಲಿನ ಹದಿನಾರು ವರ್ಣಚಿತ್ರಗಳು. ಐದು ಭಾಷೆಗಳಲ್ಲಿ ಹರಡಿ ಹಬ್ಬಿದ ಧಾರ್ಮಿಕ ಲೇಖನ ಮಾಲೆ, ಜೊತೆಗೇ ಓದುಗ ಕೊಂಡ ಕೂಡಲೇ ಗಮನಿಸಬಹುದಾದ ಅಂಶ – ಇಲ್ಲಿ ಯಾವುದೇ ಜಾಹೀರಾತೂ ಇಲ್ಲದಿರುವಿಕೆ.

ಹಾಲುಃಕಾಗದದ ಮೇಲೆ ತಿ. ತಿ. ದೇವಸ್ಥಾನ, ಭವನಗಳ ಸುಂದರವಾದ ಚೌಕಟ್ಟಿನೊಳಗೆ ಮುದ್ರಿತವಾಗಿರುವ ಸ್ವರ್ಣೋತ್ಸವ ಸಂಪುಟವು ತಿ. ತಿ. ದೇವಸ್ಥಾನಗಳ ಆಡಳಿತ ಕಳೆದ ಐವತ್ತು ವರ್ಷಗಳಲ್ಲಿ ಬೆಳೆದದ್ದನ್ನು, ಅದರ ಹಲವು ಹನ್ನೊಂದು ವಿಭಾಗಗಳ ವಿಸ್ತಾರವನ್ನು, ಆಯಾಯಾ ವಿಭಾಗಾಧಿಕಾರಿಗಳ ಲೇಖನಗಳಿಂದ ದಾಖಲುಗೊಳಿಸುತ್ತದೆ. ತಿ. ತಿ. ದೇವಸ್ಥಾನಗಳ ಆಡಳಿತದಲ್ಲಿ ಸೇರಿರುವ ಇತರ ದೇವಾಲಯಗಳ ಬಗ್ಗೆ ಉಪಕಾರ್ಯನಿರ್ವಹಣಾಧಿಕಾರಿ ಶ್ರೀ ವಾಸುದೇವ ನಾಯುಡು ಅವರೂ ತಿರುಮಲೆ ದೇವಾಲಯದ ಆರ್ಜಿತ ಸೇವೆಗಳ ಬಗ್ಗೆ ಶ್ರೀ ವಿ. ನಟರಾಜನ್ ಅವರು ಬರೆದಿದ್ದಾರೆ. ತಿ. ತಿ. ದೇವಸ್ಥಾನಗಳು ಈ ಐವತ್ತು ವರ್ಷಗಳಲ್ಲಿ ಕೈಗೊಂಡ. ಧಾರ್ಮಿಕ. ಸಾಮಾಜಿಕ, ಮಾನವಿಕ, ಸಾಂಸ್ಕೃತಿಕ, ಶೈಕ್ಷಣಿಕ ಅಭಿವೃದ್ಧಿ ಯೋಜನೆಗಳನ್ನೂ ತತ್ಸಂಬಂಧಿ ಚಿತ್ರಗಳೊಂದಿಗೆ ವಿವರಿಸಲಾಗಿದೆ

ಆಂಗ್ಲ ವಿಭಾಗದಲ್ಲಿ ವ್ಯಾವೃತವಾಗಿರುವ ಮೇಲಿನ ಐವತ್ತು ವರ್ಷಗಳ ಬೆಳವಣಿಗೆಯೇ ಅಲ್ಲದೆ ಹಿಂದೂ ಧರ್ಮ, ಸಂಸ್ಕೃತಿ, ತತ್ತ್ವಗಳ ಬಗ್ಗೆ ಹದಿನೈದು ಉತ್ತಮ ಲೇಖನಗಳಿವೆ. ಅವುಗಳಲ್ಲಿ ಹಲವು ಹೆಸರುಗಳನ್ನು ಮಾತ್ರ ಉಲ್ಲೇಖಿಸುವುದಾದರೆ ಸಿಗ್ನಿಫಿಕೆನ್ಸ್ ಆಫ್ ತಿರುಮಲ ಟೆಂಪಲ್ – ಡಾ|| ಎನ್. ರಮೇಶನ್, ಗಾಡ್ ಆಫ್ ಭಕ್ತಿ - ಪ್ರೊ|| ಎಸ್. ಎಸ್. ರಾಘವಾಚಾರ್ಯ, ಟೆಂಪಲ್ – ದಿ ಟ್ರೆಷರ್ ಹೌಸ್ ಆಫ್ ಕಲ್ಚರ್ – ಪ್ರೊ|| ಕೆ. ವಿ. ರಮಣ, ಆನ್ ಲೈಫ್ – ಡಾ|| ಅರ್ಕಸೋಮಯಾಜಿ, ಶ್ರೀ ಮಧ್ವಾಸ್ ಫಿಲಾಸಫಿ – ಡಾ|| ಪಿ ನಾಗರಾಜರಾವ್ – ಮೊದಲಾದುವು.

ತೆಲುಗು ವಿಭಾಗದಲ್ಲಿ ಅರವತ್ತೆರಡು ಲೇಖನಗಳಿವೆ. ವೇದಗಳು, ಆಗಮಗಳು, ಪಂಥಗಳು, ಪುರಾಣಗಳು, ತಾಳ್ಲಪಾಕ ಕವಿಗಳು, ವಿಗ್ರಹಾರಾಧನೆ, ವಾಸ್ತು, ಶಿಲ್ಪ, ಸಂಗೀತ, ನೃತ್ಯ ಮೊದಲಾದ ಹಲವಾರು ವಿಷಯಗಳ ಬಗ್ಗೆ ವಿದ್ವತ್ಪೂರ್ಣ ಲೇಖನಗಳಿವೆ ಇಲ್ಲಿ. ಲೇಖನಗಳಲ್ಲಿ ಕೆಲವನ್ನು ಮಾತ್ರ ಹೆಸರಿಸಬಹುದಾದರೆ ಅವು - ಯಜುರ್ವೇದಮು – ಡಾ|| ದಿವಾಕರ್ಲ ವೆಂಕಟಾವಧಾನಿ, ವಿಮಾನ ವಿದ್ಯ – ರಾಣಿ ಶ್ರೀನಿವಾಸ ಶಾಸ್ತ್ರಿ, ಆರಾಧನ ಆಗಮಶಾಸ್ತ್ರಮು - ಡಾ|| ಎಸ್. ಬಿ. ರಘುನಾಥಾಚಾರ್ಯ, ವೈನಂದಿನ ಜೀವಿತಮುನ ರಾಮಾಯಣಮು – ಶ್ರೀ ವಿದ್ಯಾಪ್ರಕಾಶಾನಂದ ಸ್ವಾಮಿ, ಭಾಗವತತತ್ತ್ವಮು – ಡಾ|| ಎನ್. ರಾಮಕೃಷ್ಣಮಾಚಾರ್ಯ, ಭಗವದ್ಗೀತ – ಉಪಶ್ರೀ, ಅನ್ನಮಾಚಾರ್ಯುನಿ ಕವಿತ – ಡಾ|| ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ, ಸಾರಂಗಪಾಣಿ ಪದಸಾಹಿತ್ಯಂ – ಡಾ|| ಎಸ್ ಗಂಗಪ್ಪ, ತೆಲುಗುವಾರಿ ಸಂಗೀತ ರೀತುಲು – ಡಾ|| ಬಿ. ರಜನೀಕಾಂತರಾವ್, ಕೃಷ್ಣ ದೇವರಾಯುಲ ವಿಷ್ಣುಭಕ್ತಿ - ಶ್ರೀ ಕೆ. ವಿ. ರಾಘವಾಚಾರ್ಯ - ಮೊದಲಾದುವು. ಈ ವಿಭಾಗ ಹಿಂದೂ ಧರ್ಮದ ಹಿಂದು ಕೈಗನ್ನಡಿಯೋಪಾದಿಯಲ್ಲಿದೆ ಎನ್ನಬಹುದು.

ತಮಿಳು ವಿಭಾಗದಲ್ಲಿ 22 ಲೇಖನಗಳಿವೆ. ಇಲ್ಲಿನ ಅವಧಾರಣೆ ಶ್ರೀನಿವಾಸ ಹಾಗೂ ತಿರುಮಲೆಗೆ. ಇಲ್ಲಿನ ಹಲವು ವಿದ್ವತ್ಪೂರ್ಣ ಲೇಖನಗಳೆಂದರೆ ತಿನ್‌ವರ್ಕೈ ಸೂಳ್ ತಿರುವೆಂಗಡಂ – ಡಾ|| ಸುಬ್ಬಿರೆಡ್ಡಿಯಾರ್, ನಮದು ವೇದಶಿಲ್ಪಂ – ಕ. ಶ್ರೀ. ಶ್ರೀನಿವಾಸಾಚಾಯರ್, ಶ್ರೀವೈಷ್ಣವ ಸಂಪ್ರದಾಯಂ – ಅಗ್ನಿಹೋತ್ರಂ ರಾಮಾನುಜ ತಾತಾಚಾರ್ಯ, ಆಂಡಾಳುಂ ಕಾಳಿದಾಸನುಂ – ಎನ್. ದೇವನಾಥಾಚಾರಿಯರ್, ಅವ್ವಿನೈಕ್ಕ ಇವ್ವಿನೈ ಕೃಪಾನಂದ ವಾರಿಯರ್, ಮುಕ್ಕವಿಗಳ್ ಕಂಡ ಕಣ್ಣೋಟಂ – ಡಾ|| ಟಿ. ಜಿ. ಅನಂತ ಸುಬ್ರಹ್ಮಣ್ಯಂ ಮೊದಲಾದವು.

ಕನ್ನಡ ಕಸ್ತೂರಿ ವಿಭಾಗದಲ್ಲಿ ಹತ್ತು ಲೇಖನಗಳಿವೆ. ಇಲ್ಲಿ ವ್ಯಾವೃತವಾಗಿರುವುದು ಹೆಚ್ಚಿಗೆ ಶ್ರೀನಿವಾಸ ಹಾಗೂ ಕರ್ನಾಟಕಗಳು. ಹಲವು ಪ್ರಮುಖ ಲೇಖನಗಳೆಂದರೆ ಶಾಸನಗಳಲ್ಲಿ ಶ್ರೀವೆಂಕಟೇಶ್ವರಸ್ವಾಮಿ - ಡಾ|| ಎನ್. ಅನಂತ ರಂಗಾಚಾರ್, ಪುರಾಣಗಳಲ್ಲಿ ಶ್ರೀನಿವಾಸ – ಕೆ. ಅಪ್ಪಣ್ಣಾಚಾರ್ಯ, ಕರ್ನಾಟಕ ಹಾಗೂ ತಿಮ್ಮಪ್ಪ ಆದ್ಯ ರಾಮಾಚಾರ್ಯ, ಶ್ರೀನಿವಾಸ ಹಾಗೂ ಹರಿದಾಸರು - ಡಾ|| ಕೆ. ಎಂ. ಕೃಷ್ಣರಾವ್, ತ್ರಿಮತಾಚಾರ್ಯರು – ತತ್ತ್ವ ಪ್ರಭಾವ – ಡಾ|| ಕೆ. ಕೃಷ್ಣಮೂರ್ತಿ, ನಮ್ಮಾಳ್ವಾರ್ - ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್, ಮೊದಲಾದುವು.

ಹಿಂದಿ ಕೌಮುದಿಯಲ್ಲಿ ಹನ್ನೆರಡು ಲೇಖನಗಳಿವೆ. ಆನಂದ ನಿಲಯ ಮಹಾತ್ಮ್ಯ –

(40 ನೇ ಪುಟ ನೋಡಿ)

(4ನೇ ಪುಟದಿಂದ)

ಸರು ಹಿಂದೂ ಧರ್ಮದ ಪ್ರಮುಖ ತತ್ತ್ವ ಮೌಲ್ಯಗಳ ಬಗ್ಗೆ ಆಚಾರ ವಿಚಾರಗಳ ಬಗ್ಗೆ ಶಿಬಿರದ ಶಿಕ್ಷಣಾರ್ಥಿಗಳಿಗೆ ತಿಳುವಳಿಕೆ ನೀಡಿದರು.

ಶಿಬಿರದ ಕೊನೆಯ ದಿನ ಶಿಬಿರದಲ್ಲಿನ ಶಿಕ್ಷಣದ ಬಗ್ಗೆ ಒಂದು ಕಿರಿಯ ಪರೀಕ್ಷೆಯನ್ನೂ ನಡೆಸಿ ಮೊದಲ ಮೂರು ಸ್ಥಾನ ಪಡೆದ ಶಿಕ್ಷಕ-ವಿದ್ಯಾರ್ಥಿಗಳಿಗೆ ವಿಶೇಷ ಪುಸ್ತಕ ಬಹುಮಾನವನ್ನೂ ಎಲ್ಲ ಶಿಕ್ಷಣಾರ್ಥಿಗಳಿಗೂ ತಿ. ತಿ. ದೇ. ಪುಸ್ತಕ ದಾನವನ್ನೂ ಮಾಡಲಾಯಿತು.

## ತಿರುಮಲೆಯಲ್ಲಿ ಕರ್ನಾಟಕಕಲ್ಯಾಣ ಮಂಟಪದ ಉದ್ಘಾಟನೆ

ತಿರುಮಲೆಯಲ್ಲಿನ ಕರ್ನಾಟಕ ಸರ್ಕಾರದ ಮುಜರಾಯಿ ಇಲಾಖೆಯ ವತಿಯಿಂದಾದ ಕರ್ನಾಟಕ ಕಲ್ಯಾಣ ಮಂಟಪದ ಉದ್ಘಾಟನೆ ಜೂನ್ 4 ರಂದು ಕರ್ನಾಟಕ ವಾರ್ತಾಮಂತ್ರಿ ಶ್ರೀ ಎಂ. ರಘುಪತಿ ಅವರ ಅಧ್ಯಕ್ಷತೆಯಲ್ಲಿ ಕರ್ನಾಟಕದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ವಿ. ಎಲ್ ಪಾಟೀಲ್ ಅವರಿಂದ ಆಯಿತು.

ಉದ್ಘಾಟನಾ ಭಾಷಣದಲ್ಲಿ ಭಾರತೀಯ ಸಂಸ್ಕೃತಿಯ ಹಿರಿಮೆಯನ್ನು ಕುರಿತು ಮಾತನಾಡಿದ ಸಚಿವರು, ಹಿಂದೂ ಧರ್ಮದ ಮೌಲ್ಯಗಳನ್ನು ಹರಡುವಲ್ಲಿ ಕರ್ನಾಟಕದ ಜನತೆ ಮೊದಲಿನಿಂದ ಮುಂಚೂಣಿಯಲ್ಲಿದೆಯೆಂದು ಐತಿಹಾಸಿಕ ಆಧಾರಗಳಿಂದ ತಿಳಿಸುತ್ತ ಈ ಸ್ತುತ್ಯ ಕಾರ್ಯದಲ್ಲಿ ಇನ್ನೂ ಆಗಬೇಕಾದ ಕಾರ್ಯಗಳು ಹೆಚ್ಚಿಗಿವೆಯೆಂದು ತಿಳಿಸಿದರು.

ತತ್ಸಂಬಂಧದಲ್ಲಿ ಕರ್ನಾಟಕ ಗ್ರಂಥ ಭಂಡಾರವನ್ನು ಉದ್ಘಾಟಿಸಿ ಮಾತನಾಡಿದ ಕರ್ನಾಟಕ ಸರ್ಕಾರದ ಕಾರ್ಯದರ್ಶಿ ಶ್ರೀ ವೆಂಕಟೇಶ್ ಅವರು ಮಾತನಾಡುತ್ತ ಮೌಲ್ಯ ಪ್ರಸಾರ ಕಾರ್ಯದಲ್ಲಿ ಗ್ರಂಥಗಳ ಉಪಯುಕ್ತತೆಯನ್ನು ವಿವರಿಸುತ್ತ ಈ ಗ್ರಂಥ ಭಂಡಾರ ಸಂಶೋಧನ ಕೇಂದ್ರವಾಗಿ ಬೆಳೆಯಲಿ ಎಂದು ಹಾರೈಸಿದರು.

ಕರ್ನಾಟಕ ದತ್ತಿ ಸಲಹಾ ಸಮಿತಿಯ ವತಿಯಿಂದ ಶ್ರೀಆದ್ಯರಾಮಾಚಾರ್ಯರ ಸಂಪಾದನೆಯಲ್ಲಿ ಹೊರಬಂದ ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡುತ್ತ ವಾರ್ತಾ ಮಂತ್ರಿ ಶ್ರೀ ರಘುಪತಿಯವರು ಕರ್ನಾಟಕದಿಂದ ತಿರುಮಲೆಗೆ ಯಾತ್ರಿಕರ ಹೆಚ್ಚಳವನ್ನೂ ಅವರಿಗಾಗಿ ಸರ್ಕಾರ ಕೈಗೊಂಡಕ್ರಮಗಳನ್ನೂ ವಿವರಿಸಿ ತಿ. ತಿ. ದೇವಸ್ಥಾನಗಳ ನೆರವಿನಿಂದ ಇನ್ನೂ ಹೆಚ್ಚಿನ ಅನುಕೂಲಗಳನ್ನು ಕಲ್ಪಿಸಬಹುದೆಂಬ ಭರವಸೆಯನ್ನೂ ನೀಡಿದರು.

ತತ್ಸಂಬಂಧದಲ್ಲಿ ಮಾತನಾಡಿದ ಸ್ಮರಣ ಸಂಚಿಕೆಯ ಸಂಪಾದಕ ಶ್ರೀ ಆದ್ಯ ರಾಮಾಚಾರ್ಯರು ತಿರುಮಲೆಯ ಪ್ರಶಾಂತವಾತಾವರಣದಿಂದ ಹೆಚ್ಚಿನ ಧಾರ್ಮಿಕ ಸಾಹಿತ್ಯ ಸಾಮಾಜಿಕ ಮೌಲ್ಯ ಪ್ರಸಾರಕ್ಕೆ ಅನುಕೂಲವೆಂದು ನುಡಿದರು. ಶ್ರೀ ಬಿ. ಜಿ. ಭಗವಾನ್ ಅವರು ಮಾತನಾಡುತ್ತ ಯಾತ್ರಿಕರಿಗೆ ಅನ್ನದಾನ ಮಾಡುವ ಯೋಜನೆಯ ರೂಪರೇಷೆಗಳನ್ನು ನೀಡಿ ಸರ್ವರ ನೆರವನ್ನು ಕೋರಿದರು.

ಶ್ರೀ ಜಯತೀರ್ಥಾಚಾರ್ಯರಿಂದ ಪ್ರಾರ್ಥನೆಯಾದನಂತರ ಮುಜರಾಯಿ ಇಲಾಖಾ ಕಮೀಷನರ್ ಶ್ರೀ ವಿಠಲರಾಯರಿಂದ ಸ್ವಾಗತಿಸಲ್ಪಟ್ಟ ಸಭೆಯಲ್ಲಿ ವಿಶೇಷಾಧಿಕಾರಿ ಶ್ರೀ ರಾಮಚಂದ್ರ ಅವರು ವರದಿಯನ್ನು ಓದಿದರು. ಶ್ರೀ ದೀನಬಂಧು ವಿ. ಆರ್ ನಾಯುಡು ಅವರು ವಂದಿಸಿದರು.

ಸಭೆಯಲ್ಲಿ ಕರ್ನಾಟಕ ಕಲ್ಯಾಣಮಂಟಪಕ್ಕೆ ದತ್ತಿ ನೀಡಿದವರನ್ನೂ ವಿಶೇಷ ಕಾರ್ಯಗಳಿಗಾಗಿ ಶ್ರೀ ಆದ್ಯ ರಾಮಾಚಾರ್ಯ ಹಾಗೂ ತಿ. ತಿ. ದೇ. ಉಪವನ ವಿಭಾಗಾಧಿಕಾರಿ ಶ್ರೀ ತಮ್ಮಣ್ಣ ಅವರನ್ನೂ ಸನ್ಮಾನಿಸಲಾಯಿತು.

ಅಂದು ಸಂಜೆ ಬೆಂಗಳೂರಿನ ಪ್ರಭಾತ ಕಲಾವಿದರು 'ಶ್ರೀನಿವಾಸನ ಲೀಲೆಗಳು' ನೃತ್ಯನಾಟಕ ಮಾಡಿ ಅಸಂಖ್ಯ ಜನವನ್ನು ಶ್ರೀನಿವಾಸ ಕಥಾಮೃತವನ್ನು ಸವಿಯುವಂತೆ ಮಾಡಿದರು.

## ಬೆಂಗಳೂರಿನಲ್ಲಿ ದಾಸಸಾಹಿತ್ಯ ಪ್ರದರ್ಶಿನಿ

ಬೆಂಗಳೂರಿನ ಮತ್ತೀಕೆರೆಯ ಶ್ರೀ ರಾಘವೇಂದ್ರ ಗುರು ಸೇವಾ ಮಂಡಳಿಯವರು ನಡೆಸಿದ ಹರಿದಾಸ ಸಮ್ಮೇಳನದಲ್ಲಿ ತಿ. ತಿ. ದೇ. ದಾಸಸಾಹಿತ್ಯ ಪ್ರಾಜೆಕ್ಟ್ ಮೂರುದಿನಗಳ ಕಾಲ ದಾಸಸಾಹಿತ್ಯ ವಸ್ತು ಪ್ರದರ್ಶನವನ್ನೂ ಏರ್ಪಡಿಸಿ ತಿ. ತಿ. ದೇ. ಪ್ರಕಟನೆಗಳನ್ನು ಬಿಡುಗಡೆ ಮಾಡಿತು.

ಮೊದಲನೆಯ ದಿನ (9-5-84) ಸಂಜೆ ಚೌಡಯ್ಯ ಸ್ಮಾರಕ ಭವನದಲ್ಲಿ ಸೋದೆ ವಾದಿರಾಜರ ಮಠದ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಸ್ವಾಮೀಜಿ ಅವರ ಅಧ್ಯಕ್ಷತೆಯಲ್ಲಿ ಕರ್ನಾಟಕದ ರಾಜ್ಯಪಾಲ ಶ್ರೀ ಅಶೋಕನಾಥ ಬ್ಯಾನರ್ಜಿ ಅವರು ಕಾರ್ಯಕ್ರಮವನ್ನು ಆರಂಭಿಸಿದರು. ಅದಕ್ಕೂ ಮುನ್ನ ಮಲ್ಲೇಶ್ವರಂ ವೃತ್ತದಿಂದ ಹರಿದಾಸರ ಮೆರವಣಿಗೆ ಚೌಡಯ್ಯ ಸ್ಮಾರಕ

ಭವನಕ್ಕೆ ಶ್ರೀ ವಾದಿರಾಜರ ತೈಲಚಿತ್ರವನ್ನು ಆನೆಯ ಮೇಲೆ ಆಸೀನಗೊಳಿಸಿ ಕರೆತಂದಿತು.

ಶ್ರೀ ಅಶೋಕನಾಥ ಬ್ಯಾನರ್ಜಿ ಅವರು ಮಾತನಾಡುತ್ತ ಹರಿದಾಸ ಸಾಹಿತ್ಯ ಸಮ್ಮೇಳನಕ್ಕೆ ಯಶ ಕೋರುತ್ತ ಎಲ್ಲ ಧರ್ಮಗಳ ಸಮ್ಮೇಳನಗಳೂ ಹೀಗೆಯೆ ಆಗಬೇಕೆಂದು ಕರೆ ನೀಡಿದರು.

ರಾಜ್ಯಪಾಲರ ಪತ್ನಿ ಶ್ರೀಮತಿ ಸುಬ್ರತೋ ಬ್ಯಾನರ್ಜಿ ಅವರು 'ದಾಸಸಾಹಿತ್ಯದಲ್ಲಿ ಸೃಷ್ಟಿ ಪ್ರಕರಣ' ಎಂಬ ಕೃತಿಯನ್ನು ಬಿಡುಗಡೆ ಮಾಡಿದರು.

ಮುಖ್ಯ ಅತಿಥಿಯಾಗಿ ಭಾಗವಹಿಸಿದ ಶ್ರೀ ಕುಮಾರಸ್ವಾಮಿ ರೆಡ್ಡಿ ಅವರು ಮಾತನಾಡುತ್ತ ಶ್ರೀ ವೆಂಕಟೇಶ್ವರ ಸ್ವಾಮಿಗೆ ಭಕ್ತರು ಸಲ್ಲಿಸಿದ ಕಾಣಿಕೆ ಯಾವುದೋ ಒಂದು ರೂಪದಲ್ಲಿ ಭಕ್ತರಿಗೇ ಸೇರಬೇಕೆಂಬುದೇ ತಿ. ತಿ. ದೇ. ಆಶಯವೆಂದೂ, ಅದಕ್ಕಾಗಿಯೇ ಸುಲಭ ಬೆಲೆಯ ಧಾರ್ಮಿಕ ಪುಸ್ತಕ ಪ್ರಕಟನೆ, ಲೇಖಕರಿಗೆ ಸಹಾಯಧನ ವಿತರಣೆ ಮುಂತಾದ ಯೋಜನೆಗಳಿವೆಯೆಂದೂ ಈ ಕಾರ್ಯದಲ್ಲಿ ಕನ್ನಡಿಗರು ಸಹಕಾರ ಪ್ರೋತ್ಸಾಹ ನೀಡಬೇಕೆಂದೂ ಭಾವಪೂರ್ಣವಾಗಿ ಕರೆ ನೀಡಿದ್ದು ಕನ್ನಡಿಗರನ್ನು ಹೆಚ್ಚು ಆಕರ್ಷಿಸಿತು.

ಶ್ರೀ ಶ್ರೀ ವಿಶ್ವೋತ್ತಮ ತೀರ್ಥರು ಕರ್ನಾಟಕ ಹರಿದಾಸ ಸಾಹಿತ್ಯದ ಹಿರಿಮೆಯನ್ನು ತಿಳಿಸಿದರು. ಶ್ರೀ ಕೆ. ಅಪ್ಪಣ್ಣಾಚಾರ್ಯರು ದಾಸಸಾಹಿತ್ಯ ಪ್ರಾಜೆಕ್ಟಿನ ಗುರಿ ಗಮನಗಳನ್ನು ವಿವರಿಸಿದರು. ಶ್ರೀ ಬನ್ನಂಜೆ ಗೋವಿಂದಚಾರ್ಯರು ಜಗನ್ನಾಥ ದಾಸರ ಹರಿಕಥಾಮೃತಸಾರದ ಬಗ್ಗೆ ಪ್ರಾಸ್ತಾವಿಕವಾಗಿ ಮಾತನಾಡಿದರು.

ದಾಸಸಾಹಿತ್ಯದಲ್ಲಿ ಸೃಷ್ಟಿ ಪ್ರಕರಣ ಕೃತಿಯ ಕರ್ತೃ ಶ್ರೀ ವಿ. ಬಾದರಾಯಣಮೂರ್ತಿ ಅವರನ್ನು ಸಭೆಯಲ್ಲಿ ಸನ್ಮಾನಿಸಲಾಯಿತು. ಶ್ರೀ ನಂದಗುಡಿ ವಿ. ರಾಜು ಅವರು ವಂದನಾರ್ಪಣೆ ಮಾಡಿದರು.

ಮೇ 10 ರಂದು ಬೆಳಗೆ ದಾಸ ಸಾಹಿತ್ಯವಸ್ತು ಪ್ರದರ್ಶನವನ್ನು ಉದ್ಘಾಟಿಸಿದ ಕರ್ನಾಟಕ ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ನಿರ್ದೇಶಕ ಶ್ರೀ ರ. ನ. ಕಣಾವಿ ಅವರು ದಾಸಸಾಹಿತ್ಯ ಪ್ರಾಜೆಕ್ಟಿಗೆ ಕರ್ನಾಟಕ ಸರಕಾರದ ವತಿಯಿಂದ ಕನ್ನಡ ಟೈಪ್ ರೈಟರನ್ನು ನೀಡುವುದಾಗಿ ಭರವಸೆಯಿತ್ತರು. ಅಂದು ಸಂಜೆ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಹರಿಕಥಾಮೃತಸಾರದ ಬಗ್ಗೆ ವಿವರಣಾತ್ಮಕ ಉಪನ್ಯಾಸ ನೀಡಿದರು. ಈ ಉಪನ್ಯಾಸ 11, 12, ರಂದು ಸಂಜೆಗಳಲ್ಲೂ ನಡೆಯಿತು.

ಮೇ 11 ರಂದು ಬೆಳಗ್ಗೆ ಕರ್ನಾಟಕದ ವಾರ್ತಾ ಮಂತ್ರಿ ಶ್ರೀ ರಘುಪತಿ ಅವರು ತಿ. ತಿ. ದೇ. ಪ್ರಕಟನೆಯಾದ 'ಕೇಶವಾದಿ ರೂಪಗಳು' ಚಿತ್ರ ಪುಸ್ತಕವನ್ನು ಬಿಡುಗಡೆ ಮಾಡಿದರು. ಈ ಪುಸ್ತಕದ ಬಗ್ಗೆ ಶ್ರೀ ಕೆ. ಅಪ್ಪಣ್ಣಾಚಾರ್ಯರು ಮಾತನಾಡಿದರು. ಅಂದು ಸಂಜೆ ಉಡುಪಿಯ ವಿ. ಎಸ್. ಆಚಾರ್ಯ ಅವರು 'ಕರ್ನಾಟಕ ಹರಿದಾಸರು' ಚಿತ್ರ ಪುಸ್ತಕವನ್ನು ಬಿಡುಗಡೆ ಮಾಡಿದರು. ಈ ಎರಡೂ ಪುಸ್ತಕಗಳೂ ಕನ್ನಡ, ತೆಲುಗು, ಹಿಂದಿ ಆಂಗ್ಲ ಭಾಷೆಗಳಲ್ಲಿ ವಿವರಣೆಯನ್ನು ಹೊಂದಿವೆ. ನಂತರ ಶ್ರೀ ಶಿವಮೊಗ್ಗ ಶ್ರೀನಿವಾಸದಾಸರು 'ವಿಜಯದಾಸರು' ಹರಿಕಥೆಯನ್ನು ಮಾಡಿದರು.

12 ರಂದು ಸಂಜೆ ಭದ್ರಗಿರಿ ಅಚ್ಯುತದಾಸರು 'ಭಕ್ತ ಪ್ರಹ್ಲಾದ' ಹರಿಕಥೆಯನ್ನು ಮಾಡಿದರು.

13 ರ ಸಂಜೆ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳೂ 14 ರಂದು ಸಂಜೆ ಶ್ರೀ ಶಿವಮೊಗ್ಗ ಶ್ರೀನಿವಾಸದಾಸರ 'ಕರ್ಜಗಿ ದಾಸರು' ಹರಿಕಥೆಯೂ ನಡೆದವು.

ರಾಷ್ಟ್ರಪ್ರಶಸ್ತಿ ವಿಜೇತ ಚಿತ್ರ ನಿರ್ದೇಶಕ ಶ್ರೀ ಜಿ. ವಿ. ಅಯ್ಯರ್ ಅವರನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ಈ ವರ್ಷದಲ್ಲಿ ದಾಸ ಸಾಹಿತ್ಯ ವಸ್ತು ಪ್ರದರ್ಶನ ಗಂಗಾವತಿ, ಬಳ್ಳಾರಿ, ಬೊಂಬಾಯಿ, ಹುಬ್ಬಳ್ಳಿ, ವಿಜಯವಾಡಗಳಲ್ಲೂ ನಡೆಯುವುದೆಂದು ತಿಳಿದು ಬಂದಿದೆ.

## ಜಿಲ್ಲಾ ಕೇಂದ್ರಗಳಲ್ಲಿ ತಿ. ತಿ. ದೇವಸ್ಥಾನಗಳ ಆಡಳಿತದ ಸ್ವರ್ಣೋತ್ಸವ

ತಿ. ತಿ. ದೇವಸ್ಥಾನಗಳ ಆಡಳಿತದ ಸ್ವರ್ಣೋತ್ಸವಗಳನ್ನು ಆಂಧ್ರ ಪ್ರದೇಶದ ಜಿಲ್ಲಾ ಕೇಂದ್ರಗಳಲ್ಲೂ, ಇತರ ಪ್ರಾಂತ್ಯಗಳ ಮುಖ್ಯ ನಗರಗಳಲ್ಲೂ, ಆಚರಿಸಬೇಕೆಂದೂ ತೀರ್ಮಾನಿಸಲಾಗಿದ್ದಂತೆಯೇ ಮೇ 27 ರಿಂದ ಜೂನ್ 2 ರವರೆಗೆ ಕೃಷ್ಣಾ ಜಿಲ್ಲೆಯ ವಿಜಯವಾಡ, ಪಶ್ಚಿಮಗೋದಾವರೀ ಜಿಲ್ಲೆಯ ಗಣಪವರಂ, ಹಾಗೂ ನೆಲ್ಲೂರುಗಳಲ್ಲಿ ಪ್ರತಿಯೊಂದು ಕಡೆಯೂ ಎರಡೆರಡು ದಿನದಂತೆ ಕಾರ್ಯಕ್ರಮಗಳಂತೆ ನಡೆಸಲಾಯಿತು

ಪ್ರತಿದಿನವೂ ಬೆಳಗ್ಗೆ 6–00 ಗಂಟೆಗೆ ಆರಂಭ ಆದ ಕಾರ್ಯಕ್ರಮಗಳು ಗೀತಾ ಪಾರಾಯಣ, ಧಾರ್ಮಿಕ ಉಪನ್ಯಾಸಗಳು, ಅನ್ನಮಾಚಾರ್ಯ ಸಂಕೀರ್ತನೆ, ತಿರುಮಲೆಯ ಶ್ರೀವೆಂಕಟೇಶ್ವರ ಸ್ವಾಮಿ ದೇವಾಲಯದ ಐತಿಹಾಸಿಕ ಪ್ರಾಧಾನ್ಯವನ್ನು ಕುರಿತಾದ ಉಪನ್ಯಾಸ, ಹರಿಕಥೆ ಮೊದಲಾದವುಗಳಿಂದ ಕೂಡಿದ್ದವು.

ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಅವರು ಈ ಮೂರೂ ಸ್ಥಳಗಳಲ್ಲಿನ ಕಾರ್ಯಕ್ರಮಗಳಿಗೆ ಹಾಜರಾಗಿದ್ದರು. ಅವರು ಈ ಕಾರ್ಯಕ್ರಮಗಳು ಪರಿಪೂರ್ಣ ಧಾರ್ಮಿಕ ಹಿನ್ನೆಲೆಯಲ್ಲಿ ಹಿಂದೂ ಧರ್ಮ ಪ್ರಸಾರದ ಉದ್ದೇಶದಿಂದ ಯೋಜಿತವಾಗಿವೆಯೆಂದೂ, ತಿ. ತಿ. ದೇಗಳ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಭಾಗವಹಿಸುವಿಕೆಯಿಂದ ಕೂಡಿವೆಯೆಂದೂ ತಿಳಿಸಿದರು.

ಚಿಂತಲಪಲ್ಲಿಯ ಯೋಗಿನಿ ಮಾತಾ, ಕರಮಚೇಟುವಿನ ಶ್ರೀ ಶ್ರೀ ಪ್ರಣವಾನಂದ ಸ್ವಾಮಿ, ಉದಯಗಿರಿಯ ಶ್ರೀ ಶ್ರೀ ಪ್ರಸನ್ನಾನಂದ ಸ್ವಾಮಿ ಅವರುಗಳು ಹಿಂದೂ ಧರ್ಮ ಸಂದೇಶವನ್ನು ಜನತೆಗೆ ನೀಡಿದರು.

ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ, ವಿದ್ವಾಂಸರುಗಳಾದ ಶ್ರೀ ಮಲ್ಲಾದಿ ಚಂದ್ರ ಶೇಖರಶಾಸ್ತ್ರಿ, ಶ್ರೀ ಎಂ. ಕೊಂಡಮಾಚಾರ್ಯ, ಅವರುಗಳು ಮೂರು ಸ್ಥಳಗಳಲ್ಲಿಯೂ ಸಭಿಕರನ್ನು ಉದ್ದೇಶಿಸಿ ಮಾತನಾಡಿದರು. ತಿರುಮಲೆ ದೇವಸ್ಥಾನದ ಐತಿಹಾಸಿಕ ಪ್ರಾಧಾನ್ಯವನ್ನು ಕುರಿತು ಎಚ್. ಡಿ. ಆರ್. ಎಸ್. ನ ಕಾರ್ಯದರ್ಶಿಯವರ ಆಪ್ತ ಸಹಾಯಕ ಶ್ರೀ ಇ. ಕರುಣಾಕರನ್ ಅವರು ಮಾತನಾಡಿದರು.

ಗಣಪವರಂ ನಲ್ಲಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣ ರಾಜು ಅವರು ಅಧ್ಯಕ್ಷತೆ ವಹಿಸಿ ಹಿಂದಿನ ಐವತ್ತು ವರ್ಷಗಳಲ್ಲಿ ತಿ. ತಿ. ದೇವಸ್ಥಾನಗಳ ಸರ್ವತೋಭಿವೃದ್ಧಿಯನ್ನು ಕುರಿತು ವಿವರಿಸಿದರು.

ತಿ. ತಿ. ದೇವಸ್ಥಾನಗಳ ಬೋರ್ಡ್ ಮಾಜಿ ಅಧ್ಯಕ್ಷ ಶ್ರೀ ಗೋಕರಾಜು ರಂಗರಾಜು ಅವರು ಭಾಗವಹಿಸಿದ್ದರು.

ತಿ. ತಿ. ದೇ. ಬೋರ್ಡ್‌ನ ಹಾಲಿ ಸದಸ್ಯರು ಶ್ರೀ ಎಲ್. ನರಸಿಂಗನಾಯಕ್ ಹಾಗೂ ಶ್ರೀ ಪಿ. ವೆಂಕಟೇಶ್ವರಲು ಅವರುಗಳೂ ಭಾಗವಹಿಸಿ ಮಾತನಾಡಿದರು.

ವಿಜಯವಾಡದಲ್ಲಿ ಕೃಷ್ಣ ಜಿಲ್ಲೆಯ ಜಿಲ್ಲಾಧಿಕಾರಿಗಳು ಮುಖ್ಯ ಅತಿಥಿಗಳಾಗಿದ್ದರು. ಪಶ್ಚಿಮ ಗೋದಾವರಿ ಜಿಲ್ಲೆಯ ಜಿಲ್ಲಾಧಿಕಾರಿಗಳು ಗಣಪವರಂನಲ್ಲಿ ಮುಖ್ಯ ಅತಿಥಿಗಳಾಗಿದ್ದರು. ನೆಲ್ಲೂರು ಜಿಲ್ಲೆಯ ಸಹಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟ್ ಅವರುಗಳು ಎರಡು ದಿನಗಳಲ್ಲಿ ಮುಖ್ಯ ಅತಿಥಿಗಳಾಗಿದ್ದರು. ✱

1984

# ಜುಲೈ ತಿಂಗಳಿನ ಮುಖ್ಯದಿನಗಳು

| | | |
|---|---|---|
| 5. | ಗುರುವಾರ | ಮಂಗಾಪುರಂ ಶ್ರೀಕಲ್ಯಾಣ ವೆಂಕಟೇಶ್ವರಸ್ವಾಮಿ ಸಾಕ್ಷಾತ್ಕಾರ ವೈಭವ. |
| 7. | ಶನಿವಾರ | ಪೆರಿಯಾಳ್ವಾರ್ ಶಾತ್ತುಮೊರೆ. |
| 9. | ಸೋಮವಾರ | ನಾಥಮುನಿ ವರ್ಷ ತಿರು ನಕ್ಷತ್ರ, ಶಯನೈಕಾದಶಿ. |
| 12. | ಗುರುವಾರ | ವ್ಯಾಸ ಪೂರ್ಣಿಮೆ. |
| 16. | ಸೋಮವಾರ | ಕರ್ಕಾಟಕ ಸಂಕ್ರಮಣ, ಆನಿವರ ಆಸ್ಥಾನ. |
| 18. | ಬುಧವಾರ | ಶುಕ್ರವಸೌಧ್ಯತ್ಯಾಗ, ಟೀಕಾಚಾರ್ಯರ ಪುಣ್ಯದಿನ. |
| 22. | ಭಾನುವಾರ | ಆಂಡಾಳ್ ತಿರುವಾಡಿಪ್ಪೂರಂ ಉತ್ಸವಾರಂಭ. |
| 28. | ಶನಿವಾರ | ಚಕ್ರತ್ತಾಳ್ವಾರ್ ವರ್ಷ ತಿರುನಕ್ಷತ್ರ, ಭೀಮನ ಅಮಾವಾಸ್ಯೆ. |
| 31. | ಮಂಗಳವಾರ | ನಾಗಚತುರ್ಥಿ, ಆಂಡಾಳ್ ತಿರುವಾಡಿಪ್ಪೂರಂ ಶಾತ್ತುಮೊರೆ, ಮಂಗಳಗೌರೀ ವ್ರತ. |

## ಮುಂದಿನ ಸಂಚಿಕೆಯಲ್ಲಿ .... .... ....

### ಸಪ್ತಗಿರಿ — ಜುಲೈ 1984

**ಚೋಳದೇಶದ ವಿಷ್ಣು ಕ್ಷೇತ್ರಗಳು**
– ರಘುಸುತ

**ಆಳ್ವಾರರ ಭಕ್ತಿ ಭಂಡಾರ**
– ಡಿ. ಕೃಷ್ಣ ಅಯ್ಯಂಗಾರ್

**ಆಳ್ವಾರರು - ನಾಯನ್ಮಾರರು**
– ಡಾ॥ ಎನ್. ಅನಂತರಂಗಾಚಾರ್ಯ

**ತೊಂಡರಡಿಪ್ಪೊಡಿಯಾಳ್ವಾರ್**
– ಕಂದಾಡೈ ಕೇಶವನ್

**ವಿಜಯನಿಗಾದ ವಿಜಯ**
– ವಿದ್ವಾನ್ ಬ. ನ. ಗುಂಡೂರಾವ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಬರೆಯಿರಿ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯ ಬೇಕು. ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

(37ನೇ ಪುಟದಿಂದ)

ಡಾ॥ ಇ. ಪಾಂಡುರಂಗರಾವ್, ಮಂದಿರ್ ಕ ವಾಸ್ತು-ವಿಸ್ತಾರ್–ಡಿ. ಸತ್ಯನಾರಾಯಣ, ಪಾಂಚರಾತ್ರಾಗಮ್ ದರ್ಶನ್ ಔರ್ ವ್ಯವಹಾರ್ – ಡಾ || ಚಂದ್ರನಾಥ್ ರಾವುತ್, ಪೂರ್ಣಪ್ರಜ್ಞ ದರ್ಶನ್ - ಡಾ || ಕಮಲ್ ನಾಥ್ ಪಂಕಜ್, ಅನ್ನಮಾಚಾರ್ಯ ಔರ್ ಉನ್‌ಕೆ ಸಮಯ ಕಾ ತಿರುಮಲ ತಿರುಪತಿ ಡಾ || ಎಂ. ಸಂಗಮೇಶಂ, ರಾಸಲೀಲಾಕಿ ಪ್ರತೀಕಾತ್ಮಕತಾ - ಡಾ || ಬಿ. ಲಕ್ಷ್ಮಯ್ಯ ಶೆಟ್ಟಿ ಮೊದಲಾದುವು.

ಈ ಪುಸ್ತಕವನ್ನು ಕೊಳ್ಳಲು ಬಲವಂತ ಗೊಳಿಸುವ ಮತ್ತೊಂದು ಅಂಶವೆಂದರೆ ಇಲ್ಲಿನ ವರ್ಣಚಿತ್ರಗಳು. ಅವುಗಳಲ್ಲಿ ಹಲವೆಂದರೆ ಶಂಕರಾಚಾರ್ಯ - ನಾರಾಯಣಗಿರಿ ದತ್ತು, ನಟರಾಜ,- ಮಾರೆಮಂಡ ಶ್ರೀನಿವಾಸ ರಾವ್, ಪರಮಪದಮು – ಎ. ರಾಮುಜಂದ್ರಯ್ಯ, ರಾಮಾನುಜ, ಮಧ್ವಾಚಾರ್ಯ, ಅನ್ನಮಾಚಾರ್ಯ– ಕೆ. ಜಗದೀಶ್, ವಿಘ್ನೇಶ್ವರ–ಪೂರ್ಣಚಂದ್ರರಾವ್, ಭಕ್ತ ಮೀರಾ– ಆರ್. ಬಿ. ಬಾಬುನಾಥ್ ಮೊದಲಾದುವು. ಜೊತೆಗೆ ಎಲ್ಲಕ್ಕೂ ಮಿಗಿಲಾಗಿ ಶ್ರೀ ವೆಂಕಟೇಶ್ವರ ಸ್ವಾಮಿ, ಪದ್ಮಾವತೀ ಅಮ್ಮನವರ ವರ್ಣಚಿತ್ರಗಳು.

ಈ ಪುಸ್ತಕದ ಸಂಪಾದಕ ವರ್ಗದ ಸಂಚಾಲಕರು ಸಪ್ತಗಿರಿಯ ಸಂಪಾದಕ ಕೆ. ಸುಬ್ಬರಾವ್ ಅವರು. ಲೇ ಔಟ್ ಆರ್ಟಿಸ್ಟ್ ಕೆ. ಜಗದೀಶ್. ತಿ. ತಿ. ದೇ. ಮುದ್ರಣಾಲಯದಲ್ಲಿ ಅತಿ ಕಡಮೆ ಅವಧಿಯಲ್ಲಿಯೇ ಆದರೂ ಅತಿ ಅಂದವಾಗಿ ಮುದ್ರಿತವಾಗಿರುವ ಈ ಪುಸ್ತಕದ ಬೆಲೆ - ಇಷ್ಟೂ ಸೇರಿ ರೂ 25–00 ಮಾತ್ರ. ಈ ಪುಸ್ತಕ ಎಲ್ಲರ ಮನೆಯಲ್ಲೂ ಇರಬೇಕಾದುದು ಎಂಬುದು ಇದನ್ನು ನೋಡಿ, ಓದಿದವರ ಸಾಮಾನ್ಯಾಭಿಪ್ರಾಯ. ★

## ರಕ್ಷಾಪತ್ರ ಚಿತ್ರಸೂಚಿ

ಮುಖ ಪುಟ : ಶ್ರೀ ಗೋವಿಂದರಾಜಸ್ವಾಮಿ ದೇವಾಲಯ

ಹಿಂಬದಿಯಲ್ಲಿ : ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ

ಒಳ ಪುಟಗಳಲ್ಲಿ ವಿಜಯವಾಡ, ಗಣಪವರಂ, ನೆಲ್ಲೂರುಗಳಲ್ಲಿ ಸ್ವರ್ಣೋತ್ಸವ

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

